|| ಶ್ರೀ ಅನ್ನದಾನೀಶ್ವರ ಪ್ರಸನ್ನ ||

ಶ್ರೀ ಶಿವಲಿಂಗೇಶ್ವರ ಶಿವಾನುಭವ ತತ್ತ್ವ ಪ್ರಚಾರ ಸಮಿತಿಯ

ಪ್ರಥಮ ಪುಷ್ಪ

## ಶ್ರೀ ಪರಮ ಗುರು

# ಅನ್ನದಾನೀಶ್ವರ ಬೋಧಾ ಶತಕ





ಗ್ರಂಥಪ್ರಣೀತರು :

ಶ್ರೀ ಮ. ನಿ. ಪ್ರ. ಚೆನ್ನವೀರ ಮಹಾಸ್ವಾಮಿಗಳು ವಿರಕ್ತಮಠ,
ಮೂಡಿ

ವಿಕಾರಿ ಸಂವತ್ಸರ, ೧೮೮೧

ಪ್ರಕಾಶಕರು :

**ಶ್ರೀ ಶಾಂತಪ್ಪ ವೀರಭದ್ರಪ್ಪ ಮೂಡ್ಡಿ**

ದಲಾಲಿ ವ್ಯಾಪಾರಿಗಳು, ಬ್ಯಾಡಗಿ.



ಪ್ರಕಾಶನ ಸ್ಥಳ :

ನವ ಮೈಸೂರ ದೇಶದ ಶಿವಮೊಗ್ಗಾ ಡಿಸ್ಟ್ರಿಕ್ಟ ಸೊರಬ ತಾಲೂಕ ಮೂಡಿ (ಕೃಷ್ಣರಾಜಪೇಟೆ) ಶ್ರೀ ಶಿವಲಿಂಗೇಶ್ವರ ಮಠದಲ್ಲಿ ಶಿವಾನುಭವ ತತ್ತ್ವ ಪ್ರಚಾರ ಸಮಿತಿಯ ವಾರ್ಷಿಕ ಸಭೆಯಲ್ಲಿ ಪ್ರಕಟಿಸಲ್ಪಟ್ಟಿತು.

ದಿನಾಂಕ ೧೭—೩—೧೯೬೦

ಮುದ್ರಕರು :

**ಎಸ್. ಎಫ್. ಕಟ್ಟಿಮನೆ**

ಮನೋಹರ ಪಾವರ ಪ್ರಿಂಟಿಂಗ್ ಪ್ರೆಸ್, ಹುಬ್ಬಳ್ಳಿ

॥ ಶ್ರೀ ಪರಮಗುರು ಅನ್ನದಾನೀಶ್ವರ ಪ್ರಸನ್ನ ॥



ಶ್ರೀ ಮ. ನಿ. ಪ್ರ. ಅನ್ನದಾನೀಶ್ವರ ಮಹಾ ಸ್ವಾಮಿಗಳು, ಹಾಲಕೆರೆ

( [illegible] )

ಓಂ॥ ಶ್ರೀ ಶಿವಲಿಂಗೇಶ್ವರ ಪ್ರಸನ್ನ ॥



**ಶ್ರೀ ಮ. ನಿ. ಪ್ರ. ಚನ್ನವೀರ ಮಹಾಸ್ವಾಮಿಗಳು**
**ಮೂಡಿ ಶ್ರೀ ಶಿವಲಿಂಗೇಶ್ವರಮಠ ಗ್ರಂಥಪ್ರಣೀತರು**

ಈ ಗ್ರಂಥದ ಓದುಗ ಮಹನೀಯರಿಗೆ ಶ್ರೇಯಸ್ಸು ಆಗಲೆಂದು
ಸದಾ ಶಿವಪ್ರಾರ್ಥನೆಯನ್ನು ಎಸಗುತ್ತಾರೆ.




# ಮುನ್ನುಡಿ

ಈ "ಅನ್ನದಾನೀಶ್ವರ ಬೋಧಾಶತಕ"ವನ್ನು ರಚಿಸಿದವರು ಚನ್ನವೀರಾರಾಧ್ಯರೆಂಬವರು. ಇವರಿಗೆ ಚನ್ನವೀರ ದೇವರೆಂದೂ ಕರೆಯುತ್ತಾರೆ. ಇವರು ಹೈದ್ರಾಬಾದ್ ದೇಶ ಕರ್ನಾಟಕ ಭಾಗದ ಗಂಗಾವತಿ ಪ್ರಾಂತದ ಅರಳೀಹಳ್ಳಿ ಗ್ರಾಮದ ಶ್ರೀ ಸಿ. ಪರಮೇಶ್ವರಯ್ಯಸ್ವಾಮಿ ಬಸವಾಂಬೆಯರೆಂಬ ಸದ್ಧರ್ಮ ನಿಷ್ಠೆಯ ಮಹೇಶ್ವರ ದಂಪತಿಗಳಿಗೆ ಪುತ್ರರಾಗಿ ಜನಿಸಿದವರಾಗಿದ್ದಾರೆ. ಆ ಗಂಗಾವತಿಯಲ್ಲಿ ಶ್ರೀ ನಿ. ಪ್ರ. ಚೆನ್ನಬಸವ ಮಹಾಸ್ವಾಮಿಗಳ ಸೇವಾನಿರತರಾಗಿ ಅವರ ಕೃಪೆಪಡೆದು ಬಾಲ್ಯವಿದ್ಯಾಭ್ಯಾಸವನ್ನು ಮಾಡಿ ಆ ನಂತರ ರೋಣ ತಾಲೂಕು ಹಾಲಕೆರೆ ಶ್ರೀ ಮ.ನಿ.ಪ್ರ. ಸ್ವರೂಪಿ ಅನ್ನದಾನೀಶ್ವರ ಮಹಾಸ್ವಾಮಿಗಳವರಲ್ಲಿ ಕೆಲವು ವರ್ಷ ಪೂಜಾನುಷ್ಠಾನ ಸೇವಾತತ್ಪರರಾಗಿದ್ದರು. ಈ ಅನ್ನದಾನೀಶ್ವರಮಹಾಸ್ವಾಮಿಗಳ ಗುರುಗಳು ವಯೋವೃದ್ಧರೂ ಜ್ಞಾನವೃದ್ಧರೂ ತಪಸ್ವಿಗಳೂ ಆದ ಹಾಲಕೆರೆಯ ಅನ್ನದಾನ ಮಹಾಸ್ವಾಮಿಗಳಾಗಿದ್ದರು. ಅವರು ಶತಾಯುಗಳಾಗಿ ಲಿಂಗೈಕ್ಯರಾದವರು. ಈಗಿನ ಶ್ರೀ ಮ.ನಿ.ಪ್ರ. ಅನ್ನದಾನೀಶ್ವರ ಮಹಾ ಸ್ವಾಮಿಗಳು. ಬಾಲ್ಯದಲ್ಲಿ ಗಣಿತ ಮತ್ತು ಚಿತ್ರಕಲೆಗಳಲ್ಲಿ ಚತುರರಾಗಿದ್ದರು. ಶಾಲೆಯಲ್ಲಿ ಅಭ್ಯಾಸವನ್ನೂ ಮಠದಲ್ಲಿ ವ್ಯವಸ್ಥೆ ಕಾರ್ಯವನ್ನೂ ಬಹಳ ಉತ್ತಮರೀತಿಯಿಂದ ಮಾಡಿದರು. ತಮ್ಮ ಗುರುಗಳ ಅಪ್ಪಣೆಯಂತೆ ರೋಣದ ಶ್ರೀ ನಿ. ಪ್ರ. ಗುರುಪಾದಸ್ವಾಮಿಗಳವರಿಂದ ಅನುಗ್ರಹ ಪಡೆದು ಅವರಿಂದಲೇ ಆಶ್ರಮವನ್ನು ಪಡೆದರು. ಮಠಾಧಿಕಾರವನ್ನು ವಹಿಸಿಕೊಂಡ ಮೇಲೆ ಮಠದ ಘನತೆಯನ್ನು ಬಹಳವಾಗಿ ಹೆಚ್ಚಿಸಿದರು. ಶ್ರೀ ಶಿವಯೋಗ ಮಂದಿರದ ಸ್ಥಾಪಕರಾದ ಶ್ರೀ ನಿ. ಪ್ರ. ಕುಮಾರಸ್ವಾಮಿಗಳು ಇವರ ಸಮಾಜ ಸೇವೆಯ ಅತ್ಯಾಸಕ್ತಿಯನ್ನು ಕಂಡು ಬಹು ಸಂತೋಷಪಟ್ಟರು. ತಮ್ಮ ಹೆಸರಿಗೆ ತಕ್ಕಂತೆ ಅನ್ನಪ್ರಸಾದ ದಾನ ಕಾರ್ಯಗಳಲ್ಲಿ ಇವರು ಅತ್ಯಂತ ಅಭಿಮಾನವುಳ್ಳವರಾಗಿ ಮಂಟಪ ಪೂಜೆ ಮೊದಲಾದವುಗಳನ್ನು ಬಹಳವಾಗಿ ನಡಸಿದರು. ಹಾನಗಲ್ಲ ಪೂಜ್ಯರ ಅಪ್ಪಣೆಯಂತೆ ಕೋಡಿಕೊಪ್ಪ ನರೇಗಲ್ಲ ಮಠಗಳಲ್ಲಿ

ಅನುಷ್ಠಾನಮಾಡಿ ಶಿವಯೋಗಸಿದ್ಧರಾದರು. ಹಾಲಕೆರೆಯಲ್ಲಿ ಪಾಠಶಾಲೆಯನ್ನು ಸ್ಥಾಪಿಸಿದರು. ನರೇಗಲ್ಲ ಗ್ರಾಮದಲ್ಲಿ ಇವರು ಸ್ಥಾಪಿಸಿದ ಇಂಗ್ಲೀಷ್ ಶಾಲೆಯು ಈಗ ಪ್ರೌಢಮಾಧ್ಯಮಿಕ ಶಾಲೆಯಾಗಿ ಮಾರ್ಪಟ್ಟಿದೆ ಇದಕ್ಕಾಗಿ ಈಗಾಗಲೇ ಲಕ್ಷಾಂತರ ರೂಪಾಯಿಗಳನ್ನು ವಿನಿಯೋಗಿಸಿದ್ದಾರೆ. ಇಟಗಿ ಕೋಡಿಕೊಪ್ಪ ಅಬ್ಬಿಗೇರಿ, ಗುಜೀಹಾಳ ಮೊದಲಾದ ಗ್ರಾಮಗಳಲ್ಲಿ ಅಂದವಾಗಿ ಮಠಗಳನ್ನು ಕಟ್ಟಿಸಿದ್ದಾರೆ ಗದಗಿನಲ್ಲಿ ಶಿವಾನಂದಾಶ್ರಮವನ್ನು ಸ್ಥಾಪಿಸಿದ್ದಾರೆ ಮತ್ತು ಗದಗಿನಲ್ಲಿಯ ಹದಗಲೀಮಠವನ್ನು ಸಮಾಜಸೇವೆಯ ಕಾರ್ಯಗಳಿಗಾಗಿ ಮುಡುಪಾಗಿಟ್ಟಿದ್ದಾರೆ. ಅಲ್ಲಲ್ಲಿ ಅನೇಕ ವೇಳೆ ಪುರಾಣ ಪ್ರವಚನಗಳನ್ನು ನಡಸಲಿಕ್ಕೆ ಮೂಲಕಾರಣರಾಗಿದ್ದಾರೆ. ಗದಗಿನಲ್ಲಿ ಶಿವಾನುಭವ ಜ್ಞಾನದಾಸೋಹವನ್ನು ಪ್ರಖ್ಯಾತವಾದ ರೀತಿಯಲ್ಲಿ ನಡಸಿದವರಾಗಿದ್ದಾರೆ.

ಇವರಿಗೆ ತಮ್ಮ ಮಠಕ್ಕಿಂತಲೂ ಬಾದಾಮಿ ತಾಲೂಕಿನಲ್ಲಿರುವ ಶ್ರೀ ಶಿವಯೋಗಮಂದಿರದಲ್ಲಿ ಹೆಚ್ಚಿನ ಪ್ರೀತಿ. ಶಿವಯೋಗಮಂದಿರ ಸಂಸ್ಥೆಯ ಮ್ಯಾನೇಜಿಂಗ್ ಟ್ರಸ್ಟಿಗಳಲ್ಲಿ ಒಬ್ಬರಾಗಿದ್ದಾರೆ. ಇವರ ಹೆಚ್ಚಿನ ಸಾಹಸದಿಂದಲೇ ಶ್ರೀ ಹಾನಗಲ್ ಪೂಜ್ಯರ ತರುವಾಯ ಶ್ರೀ ಶಿವಯೋಗಮಂದಿರವು ಉಜ್ಜೀವನಗೊಂಡಿವೆ. ಬಾಗಲಕೋಟೆಯ ಹತ್ತಿಯ ಗಿರಣಿಗೆ ಇದ್ದ ಸಾಲದಿಂದ ಶಿವಯೋಗ ಮಂದಿರಕ್ಕೆ ಹಾನಿಯುಂಟಾಗುತ್ತಿದ್ದುದನ್ನು ತಕ್ಕ ಪ್ರಯತ್ನದಿಂದ ಭಿಕ್ಷೆಯನ್ನುಮಾಡಿ ಸಾಲವನ್ನು ತೀರಿಸಿ ಶಿವಯೋಗಮಂದಿರವು ಸ್ವತಂತ್ರವಾಗಿರುವಂತೆ ಮಾಡಿದ್ದಾರೆ. ಆಗಾಗ ಧಾನ್ಯದಭಿಕ್ಷೆಯನ್ನುಮಾಡಿ ಮಂದಿರದ ದಾಸೋಹಕಾರ್ಯಗಳನ್ನು ಈಗಲೂ ಮಾಡುತ್ತಿದ್ದಾರೆ. ಈ ಹಿತಚಿಂತನೆಯು ಇಡೀ ಭಾರತ ದೇಶವನ್ನೇ ಜಗತ್ತನ್ನೇ ಧಾರ್ಮಿಕದಲ್ಲಿ ಉದ್ಧಾರಮಾಡುವ ಮಹಾಕಾರ್ಯವಾಗಿ ಪರಿಣಮಿಸಿದೆ.

ಇದಲ್ಲದೆ ಇವರು ಮಹಾಯೋಗಿಗಳೂ ತ್ರಿಕಾಲ ಶಿವಪೂಜಾ ಧುರಂಧರರೂ ಆಗಿದ್ದಾರೆ. ಇವರು ವರವನ್ನು ಕೊಟ್ಟುದರಿಂದ ಅನೇಕರು ಉದ್ಧಾರವಾದ ಪವಾಡಗಳು ತೋರಿಬಂದಿವೆ. ಸರ್ವಪ್ರಾಣಿಗಳಿಗೂ ಯಾವಾಗಲೂ ಲೇಸನ್ನು ಬಯಸುವದೇ ಇವರ ಮಹತ್ತರವಾದ ಕೃಪಾದೃಷ್ಟಿಯಾಗಿದೆ.

ಇಂತಹ ಗುರುಗಳ ಸೇವೆಯನ್ನು ಮಾಡಿ ಅನಂತರ ಹಾನಗಲ್ಲ ಪರಮ ಪೂಜ್ಯ ಶ್ರೀ ಮ. ನಿ. ಪ್ರ. ಕುಮಾರ ಶಿವಯೋಗಿಗಳವರಿಂದ ಸ್ಥಾಪಿತವಾದ ಶ್ರೀ ಶಿವಯೋಗ ಮಂದಿರದಲ್ಲಿ ಸಂಸ್ಕೃತ ವಿದ್ಯಾಭ್ಯಾಸ ಯೋಗಾನುಷ್ಠಾನ ನಡಿಸಿ ಉಭಯ ಭಾಷಾಚಾರ್ಯರೆಂದು ಖ್ಯಾತಿವೆತ್ತ ಶ್ರೀ ಘ. ಚ. ಸದಾ ಶಿವ ಶಿವಾಚಾರ್ಯ ಮಹಾಸ್ವಾಮಿಗಳವರಿಂದ ನಿರ್ಮಿಸಲ್ಪಟ್ಟ ಗಿರಿಯಾಪುರದ ಶ್ರೀ ಕುಮಾರಾಶ್ರಮದಲ್ಲಿ ಶಿವಾನುಭವವನ್ನು ಅನೇಕ ಧಾರ್ಮಿಕ ಶಾಸ್ತ್ರಗಳನ್ನು ಆಳವಾಗಿ ಅಭ್ಯಸಿಸಿದರು.

ಹೀಗೆ ಚನ್ನವೀರದೇವರು ಪ್ರಸಿದ್ಧರಾಗಿ ಸೊರಬದ ತಾಲೂಕು ಮೂಡಿ ದೊಡ್ಡಿಕೊಪ್ಪ ನೆಲ್ಲಿಕೊಪ್ಪ ಈ ಮೂರು ಗ್ರಾಮಗಳಿಗೆ ಮುಖ್ಯವಾದ ಮೂಡಿ ಯಲ್ಲಿನ ಶ್ರೀ ಶಿವಲಿಂಗೇಶ್ವರ ಮಠದ ಅಧಿಕಾರಿಗಳಾಗಿ ಶ್ರೀ ನಿ. ಪ್ರ ಚೆನ್ನವೀರ ಸ್ವಾಮಿಗಳು ಎಂಬ ಹೆಸರಿನಿಂದ ಪ್ರಖ್ಯಾತರಾಗಿದ್ದಾರೆ. ಇವರಿಗೆ ಸ್ವಾಮಿತ್ವವು ಬನವಾಸಿ ಹೊಳೆಮಠದಶ್ರೀ ನಿ. ಪ್ರ. ಸಿದ್ಧವೀರಸ್ವಾಮಿಗಳವರಿಂದ ತಾರೀಖು:– ೧೬—೩—೪೯ ರಲ್ಲಿ ಮೂಡಿಯಲ್ಲಿ ವಿಶೇಷ ವೈಭವದೊಡನೆ ಸರ್ವಜನರ ಸಮ್ಮೇಲನದಲ್ಲಿ ವಹಿಸಲ್ಪಟ್ಟಿತು. ಇವರು ತಮ್ಮ ಪರಮ ಗುರುಗಳಾದ ಶ್ರೀ ಅನ್ನದಾನೀಶ್ವರ ಮಹಾಸ್ವಾಮಿಗಳವರಿಂದ ಪಡೆದ ಧರ್ಮಜ್ಞಾನದಲ್ಲಿ ಯಥೋಚಿತವಾಗಿ ಸಂಗ್ರಹಿಸಿ ಸಮಾಜಕ್ಕೆ ಧರ್ಮಜ್ಞಾನ ವನ್ನು ಹರಡುವ ಉದ್ದೇಶದಿಂದ ಈ ಶತಕವನ್ನು ರಚಿಸಿರುವುದು ಸಮಾಜದ ಉಪಕಾರ ದೃಷ್ಟಿಯಿಂದಲೇ ಆಗಿವೆ. ಸರ್ವಜನರಿಗೂ ಹಿತಕಾರಿಯಾದ ಆರು ಸ್ಥಲಗಳ ಮಾರ್ಗದ ಜ್ಞಾನವು ಹರಡುವಂತಾಗಿ ಧರ್ಮೋನ್ನತಿಯಾಗಲೆಂದು ಬಯಸುವೆನು. ವೀರಶೈವರ ಮುಖ್ಯ ಆಚರಣೆಗಳು ಸಂಗ್ರಹವಾಗಿ ಈ ಶತಕದಲ್ಲಿ ಹೇಳಲ್ಪಟ್ಟಿವೆ.

ಈ ಶ್ರೀ ಮ. ನಿ. ಪ್ರ. ಚೆನ್ನವೀರ ಸ್ವಾಮಿಗಳವರು ಅನುಗ್ರಹ, ಧರ್ಮಸೂಕ್ಷ್ಮವಿಚಾರ ಮುಂತಾದವುಗಳನ್ನು ಪಡೆದು ತಪೋನಿಷ್ಠರಾಗಿ ಧರ್ಮಪ್ರಸಾರವನ್ನು ಮಾಡಲಿಕ್ಕೆ ಅರಿತುನುರಿತವರಾಗಿ ಈ ಮಠಕ್ಕೆ ದೊರಕಿ ದುದು ಈ ಪ್ರಾಂತದ ಜನರ ವಿಶೇಷ ಸುಕೃತ ಮತ್ತು ಭಾಗ್ಯೋದಯವೆಂದು ಭಾವಿಸಬೇಕಾಗಿದೆ.

ಬಹಳ ಪೂರ್ವದಿಂದಲೂ ಭಾರತೀಯರು ಧರ್ಮ ಗ್ರಂಥಗಳನ್ನು ಬರೆಯುವುದರ ಕಡೆಗೆ ಹೆಚ್ಚು ಗಮನವನ್ನು ತೆಗೆದುಕೊಂಡಿದ್ದಾರೆ. ಏಕೆಂದರೆ ಬರಿಯ ವಿದ್ಯೆಯ ಅಭ್ಯಾಸದಿಂದ ಲೌಕಿಕದ ಜೀವನ ಕಾಲದಲ್ಲಿನ ಸುಖವುಂಟಾಗುತ್ತದೆ. ಧಾರ್ಮಿಕ ಸಾಧನೆಯಿಂದ ಈ ದೇಹದಲ್ಲಿನ ಜೀವನ ಉನ್ನತಿಯಾಗುವುದಲ್ಲದೆ ಜೀವನಿಗೆ ಜನ್ಮಾಂತರಗಳುಂಟಾದರೆ ಆ ಜನ್ಮಗಳಲ್ಲಿಯೂ ಜೀವನ ಉನ್ನತಿಯನ್ನು ಮಾಡಲಿಕ್ಕೆ ಧಾರ್ಮಿಕವು ಅನುಕೂಲಮಾಡಿ ಕೊಡುತ್ತದೆ. ಹೀಗಿರುವ ಹೆಚ್ಚಿನ ಪ್ರಯೋಜನವನ್ನು ತಿಳಿದು ಕೊಂಡುದರಿಂದಲೇ ಪೂರ್ವಿಕ ಮಹನೀಯರು ಧರ್ಮಗ್ರಂಥಗಳನ್ನು ಹೆಚ್ಚಾಗಿ ಬರೆದಿದ್ದಾರೆ. ಈಗಲೂ ಅಂತಹ ಗ್ರಂಥಗಳೇ ಹೆಚ್ಚಾಗಬೇಕು. ಭಾರತ ಧರ್ಮಗಳ ಮೂಲ ತತ್ವಸಾಧನೆಯನ್ನು ಬೋಧಿಸುವುದು ವೀರಶೈವ ಧರ್ಮವಾಗಿದೆ. ಈ ಧರ್ಮದ ಬೋಧೆಯನ್ನೇ ಸುಲಭವಾಗಿ ತಿಳಿಯುವಂತೆ ಶ್ರೀ ನಿ. ಪ್ರ. ಚನ್ನವೀರ ಸ್ವಾಮಿಗಳು ತಮ್ಮ ಗುರುಗಳ ಅಂಕಿತದಿಂದ ಪದ್ಯಗಳನ್ನು ಮಾಡಿ ಬೋಧಿಸಿರುವುದು ಸಂತೋಷಕರವಾದ ಸಂಗತಿಯಾಗಿದೆ.

ಈ ಗ್ರಂಥವನ್ನು ಮುದ್ರಿಸಲಿಕ್ಕೆ ಮೂಡಿ ಗ್ರಾಮದ ಶ್ರೀ ಕುಬಸದ ಪುಟ್ಟಪ್ಪನವರ ಅಳಿಯಂದಿರಾದ ಬ್ಯಾಡಿಗಿ ಶ್ರೀ ಮೂಡ್ಲಿ ಶಾಂತಪ್ಪನವರು ಧನಸಹಾಯ ಮಾಡಿದುದರ ಉಪಕಾರವು ಚಿರಸ್ಮರಣೀಯವಾಗಿದೆ.

ಸಮಾಜದ ದಾಸಾನುದಾಸನಾದ,

**ಶ್ರೀ ಚೆನ್ನಮಲ್ಲಿಕಾರ್ಜುನ**

ಪ್ರಕಾಶಕ ಸದ್ಧರ್ಮದೀಪಿಕೆ, **ಮೈಸೂರು.**



ಲಿಂಗೈಕ್ಯ ಶ್ರೀ ಪ್ರಭುವಪ್ಪನವರು ಮಹಾಲಿಂಗಪ್ಪನವರು
ಕುಬಸದ, ಮೂಡಿ

# ಶ್ರೀ ಪ್ರಭುವಪ್ಪನವರ ಜೀವನ ಚರಿ:

ಶ್ರೀಮಾನ್ ಪ್ರಭುವಪ್ಪ ಕುಬಸದ ಮೂಡಿ ಇವರ ಸರಳ ಜೀವನದ ಬಾಳ್ವೆಯು ಸಮಾಜಕ್ಕೇ ಆದರ್ಶನೀಯವಾಗಿತ್ತು. ಇವರು ತಾರೀಖು ೨೫-೬-೧೯೧೩ ರಲ್ಲಿ ಮೂಡಿ ಗ್ರಾಮದಲ್ಲಿ ವೀರಶೈವೋತ್ತಮ ಸದ್ಧರ್ಮ ನಿಷ್ಠಾಗರಿಷ್ಠರಾದ ಮಹಲಿಂಗಪ್ಪ ಶಿವಲಿಂಗಮ್ಮನವರೆಂಬ ದಂಪತಿಗಳುದರದಲ್ಲಿ ಜನಿಸಿದರು. ಕೇವಲ ಬಡತನದ ಬಾಳುವೆಯಲ್ಲಿ ಬಾಲ್ಯದ ಕಾಲವನ್ನು ಕಳೆಯುತ್ತ ವಿದ್ಯಾಭ್ಯಾಸವೆಂಬ ಕಟ್ಟಡದ ಬಾಗಿಲಹೊಸ್ತಿಲನ್ನು ದಾಟುವ ವೇಳೆಗೆ ಅಭ್ಯಾಸ ವಿರಾಮವೂ ಹಿಂಬಾಲಿಸಿತು. ಸಂಗಡಲೇ ಏಕೈಕ ಪೋಷಕರಾಗಿದ್ದ ಪಿತೃವಿಯೋಗವೂ ಆಯಿತು ಆ ಚಿಕ್ಕವಯಸ್ಸಿನಲ್ಲಿ ಬಾಲಕ ಸಹೋದರನಾದ ಶಿವರುದ್ರಪ್ಪ ಸಹ ಕೂಲಿಮಾಡಿ ಪಡಲಾಗದ ಭವಣೆಯಲ್ಲಿ ವೃದ್ಧಮಾತೆಯೊಡನೆ ಜೀವನವನ್ನು ನಿರ್ವಹಿಸುತ್ತಿದ್ದನು. ಆ ವೇಳೆಯಲ್ಲಿ ಹಿರಿಯರಾದ ಪ್ರಭುವಪ್ಪನವರ ಪೂರ್ವಪುಣ್ಯವಶಾತ್ ೧೭-೧೮ ವರ್ಷ ವಯಸ್ಸಿಗೆ ಗ್ರಾಮಪ್ರಮುಖ ಸಜ್ಜನರ ಶಿವಾನುಭವಿಗಳ ಗಮನವನ್ನು ನೀತಿ-ಕಾರ್ಯದಕ್ಷತೆಗಳಿಂದ ತಮ್ಮ ಕಡೆಗೆ ಸೆಳೆದರು. ತದ್ದ್ವಾರಾ ಅವಶ್ಯ ಸಹಾಯ ಸಡತೆಗಳನ್ನು ಪಡೆದರು. ವ್ಯವಹಾರ ಜೀವನವನ್ನು ಆರಂಭಿಸಿದರು. ತಮ್ಮ ಕಾರ್ಯಗಳಲ್ಲಿ ನ್ಯಾಯನಿಷ್ಠುರತೆ ಕಾರ್ಯದಕ್ಷತೆ, ಸಮಯಾವಧಾನ, ದೈವಿಕವಿಶ್ವಾಸ ಗಳಿಂದ ಕ್ರಮೇಣ ಸಮಾಜದಲ್ಲಿ ಉತ್ತರೋತ್ತರ ಜವಾಬ್ದಾರಿ ಮತ್ತು ಗಣ್ಯತೆಯನ್ನು ಹೊಂದಿದರು. ಆರ್ಥಿಕ ಅನುಕೂಲಗಳನ್ನು ಪಡೆದು ದಾಸೋಹ ಪ್ರಿಯರೆನಿಸಿ ಹರಗುರು ಚರಮೂರ್ತಿಗಳನ್ನು ತಣಿಸಿದರು. ಬಡವರ ಅನಾಥರ ಉದ್ಧಾರಕ್ಕಾಗಿ ಶಕ್ತ್ಯಾನುಸಾರ ಶ್ರಮಿಸಿದರು. ಇವರ ಆತ್ಮೀಯ ಸ್ನೇಹಿತರಾದ ಪ್ರೈಮರಿಶಾಲೆಯ ಹೆಡ್‌ಮಾಷ್ಟರಾದ ಶ್ರೀ ಎಂ. ಕೆ. ಉಜ್ಜಯಿನಪ್ಪನವರೂ ಇವರೂ ಸೇರಿ ಶಾಲೆಗಳಿಗಾಗಿ ಸಮಾಜದ ಸಹಾಯ ಸಹಕಾರಗಳಿಂದ ಮೂಡಿಯಲ್ಲಿ ವಿದ್ಯಾರ್ಥಿನಿಲಯವನ್ನೇರ್ಪಡಿಸಿದರು. ಇದರಂತೆ ಹಗಲಿರುಳು ಸಮಾಜೋದ್ಧಾರವನ್ನೇ ಮುಖ್ಯಗುರಿಯನ್ನಾಗಿಟ್ಟುಕೊಂಡು ಜೀವನವನ್ನು ಸಾಗಿಸಿದರು. ಇವರಲ್ಲಿ ಧಾರ್ಮಿಕ–ನೈತಿಕ–ವ್ಯವಹಾರಿಕ–ಸಾಮಾಜಿಕ

ಹಾಗು ರಾಜಕೀಯಗಳ ಪೂರ್ಣ ಅನುಭವವಿತ್ತು. ಈ ಪ್ರಾಂತದ ಐಚ್ಛಿಕ ವರ್ಗಕ್ಕೆಲ್ಲ ಹಿರಿದಾದ ಸಹಾಯರಾಕಗಿದ್ದರು. ಸ್ವತಂತ್ರವಾಗಿ ಜ್ಯೋತಿಷ್ಯ ವೈದಿಕ, ಮತ್ತು ವೈದ್ಯಶಾಸ್ತ್ರಗಳನ್ನು ಅಭ್ಯಾಸಮಾಡಿ ಅನುಭವಿಗಳಾಗಿದ್ದರು. ಐಶ್ವರ್ಯವಂತರಾದರೂ ಬಡವರಂತೆ ಸರಳಜೀವನದ ಪೂರ್ಣಾನುಭವಿಗಳಾಗಿದ್ದರೂ ತಿಳಿವಳಿಕೆಯಿಲ್ಲದವರೊಡನೆಯೂ ಬೆರೆತು ಮಾಡುವ ಅವರ ಸುಧಾರಣೆ, ಬಾಲಕರೊಡನೆಯೂ ಹೊಂದಿಕೊಳ್ಳುವ ರಸಿಕತ್ವ, ಸಮಾಸಜ್ಜನಿಕೆ, ಶಿವಾನುಭವ ಇವುಗಳ ಕಾಲಕ್ಷೇಪ ಮತ್ತು ಆದರ್ಶ ಅನುಕರಣ ಇವು ಶ್ಲಾಘನೀಯವಾಗಿದ್ದವು. ಹೀಗೆ ಶರಣರ ಸಂಪ್ರದಾಯದಲ್ಲಿ ನಡೆಯುತ್ತ ಮಹಾದೇವನ ಕೃಪಾಪಾತ್ರರಾಗಿ ಗೃಹಸ್ಥಾಶ್ರಮದಲ್ಲಿಯೂ ಬಸವಾದಿ ಪ್ರಮಥರ ಉದಾಹರಣೆಯನ್ನು ಎತ್ತಿತೋರಿಸಿದರು. ಹೀಗೆ ನಡೆಯುತ್ತಾ ತಮ್ಮ ೫೫ನೇ ವರ್ಷದಲ್ಲಿ ಮೂಡಿ ಶ್ರೀ ಶಿವಲಿಂಗೇಶ್ವರ ಮಠಾಧ್ಯಕ್ಷರೂ ತಪಸ್ವಿಗಳೂ ಆದ ಶ್ರೀ ಮ. ನಿ. ಪ್ರ. ಚನ್ನವೀರಮಹಾಸ್ವಾಮಿಗಳ ಪಾದ ಸಮ್ಮುಖದಲ್ಲಿ ಸುಖಾಸೀನರಾಗಿ ಲಿಂಗಧ್ಯಾನದಲ್ಲಿ ಸಾಮರಸ್ಯವನ್ನು ಪಡೆದರು. ಇಂತಹ ಮಹಾವ್ಯಕ್ತಿಯನ್ನು ಕಳೆದುಕೊಂಡು ಈ ಪ್ರಾಂತವು ತುಂಬಿಬರಲಾರದ ಕೊರತೆಯನ್ನು ಪಡೆದಂತಾಯಿತು.

ಇವರ ಅಳಿಯಂದಿರರಾದ ಶ್ರೀ ಮೂಡ್ಲಿ ಶಾಂತಪ್ಪನವರು ಮೇಲ್ಕಂಡ ಶ್ರೀ ಪ್ರಭುವಪ್ಪನವರ ಉನ್ನತಮಾರ್ಗದಲ್ಲಿಯೇ ನಡೆಯತಕ್ಕವರಾಗಿದ್ದಾರೆ. ಶಿವಪೂಜೆಯಲ್ಲಿ ನಿಷ್ಠರು ಸಮಾಜಾಭಿಮಾನಿಗಳು ಪರೋಪಕಾರಿಗಳು ಆಗಿದ್ದು ಈ ಪ್ರಾಂತದ ಶ್ರೀ ಶಿವಲಿಂಗೇಶ್ವರ ಶಿವಾನುಭವ ತತ್ವಪ್ರಚಾರ ಸಮಿತಿಯ ವಾರ್ಷಿಕ ಸಭೆ ಮೊದಲಾದವುಗಳಲ್ಲಿ ವಿಶೇಷಾಸಕ್ತಿಯಿಂದ ಕೆಲಸ ಮಾಡಿ ಶ್ರೀ ಪ್ರಭುವಪ್ಪನವರ ಕೀರ್ತಿಯನ್ನೇ ಮುಂದು ಪ್ರಕಾಶಪಡಿಸುವವರಾಗಿರುವದು ಬಹು ಸಂತೋಷಪ್ರದವಾಗಿದೆ.

ಸಮಾಜ ಸೇವಕ

**ಶ್ರೀ ಎಂ. ಎಸ್. ಪುಟ್ಟಣ್ಣ**

**ಆಯುರ್ವೇದ ಪಂಡಿತ, ಮೂಡಿ (ಸೊರಬದ ತಾಲೂಕು)**



# ಅರ್ಪಣ

ಪರಮ ವೈರಾಗ್ಯ ಮೂರ್ತಿಗಳೂ, ಮಹಾ ತಪಸ್ವಿಗಳೂ
ತ್ರಿವಿಧ ದಾಸೋಹ ಮೂರ್ತಿಗಳೂ

ಶಿವಯೋಗ-ಶಿವಜ್ಞಾನ-ಶಿವಭಕ್ತಿ ಸಂಪದ್ಯುಕ್ತರೂ
ಶ್ರೀ ಶಿವಯೋಗಮಂದಿರ ಸಂಸ್ಥೆಯ ಜೀರ್ಣೋದ್ಧಾರಕರೂ
ಆಚಾರನಿಷ್ಠರೂ

ನನ್ನ ಪರಮ ಸದ್ಗುರುವರೇಣ್ಯರೂ, ಕೃಪಾಮೂರ್ತಿಗಳೂ ಆಗಿ
ಸದಾ ಮನ್ಮನೋನಿಲಯದಲ್ಲಿ ನೆಲಸಿರುವ
ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ

ಹಾಲಕೆರೆ

**ಶ್ರೀ ಅನ್ನದಾನ ಮಹಾಶಿವಯೋಗಿಗಳವರ**

ದಿವ್ಯಪಾದಾರಾವಿಂದಗಳಲ್ಲಿ ಅನನ್ಯ ಭಕ್ತಿಪೂರ್ವಕವಾಗಿ
ಗುರುಬೋಧೆಯಿಂದುದಯಿಸಿದ ಈ ಕುಸುಮವನ್ನು

**ಅರ್ಪಿಸಿದೆ.**



# ವಿಷಯಗಳ ವಿವರ

# ಶ್ರೀ ಪರಮಗುರು ಅನ್ನದಾನೀಶ್ವರ ಬೋಧಾ ಶತಕ

[ ಭಾಮಿನಿ ಷಟ್ಪದಿ ]

## ೧. ಗುರುಸ್ತೋತ್ರ

ಗುರುವೆ ಭಕ್ತರ ಹೃದಯಕುಹರದಿ |
ನಿರುತವಾಸಿಸಿ ಚಿತ್ಸ್ವರೂಪದಿ |
ಹೊರಗೆ ಚರರೂಪವನು ಧರಿಸುತ ಸಕಲರೂಪಿನಲಿ ||
ಚರಿಸಿಧರೆಯೊಳು ತತ್ವಬೋಧೆಯ |
ನರಿಯಲಿಚ್ಛಿಪ ಸುಜನವೃಂದಕೆ |
ಒಲಿದುರಕ್ಷಿಪ ಪಾಲಕರೆ ಗುರು ಅನ್ನದಾನೀಶ ||೧||

ಕ್ಷೀರಕೆರೆಪುರವಾಸಿ ಎನಿಸುತೆ |
ವೀರಶೈವಾಚಾರವರಿಪುತೆ |
ಸಾರ ಭಕ್ತೋದ್ಧಾರಗೆಯ್ಯುತೆ ಮೆರೆವ ಶಿವಯೋಗಿ ||
ಚಾರುಚರಿತವಿಶಾಲ ಮನಗಂ |
ಭೀರಯುತ ನಿರತಪ್ರಪೂರಿತ |
ಗುರುವೃಷೀನೆಲೆ ಪಾಲಕರೆ ಗುರು ಅನ್ನದಾನೀಶ ||೨||

## ೨. ಕವಿಯ ವಿಷಯ

ನಿನ್ನನು ಪಥಾಪಿಸುತೆ ಜನನು |
ಪನ್ನಸದ್ಗತಿ ಕಣಯುವರಿಯುತ |
ನಿನ್ನ ಉಪಕೃತಿ ಭಜನೆರೂಪದಿ ಕೀರ್ತಿಸುತ್ತಿರಲು ||
ಚನ್ನವೀರೇಶಾಖ್ಯನೆಂಬವ |
ನಿನ್ನ ಸನ್ನಿಧಿ ಸೇರಿಬೇಡಲು |
ನನ್ನಿಯಿಂ ಬೋಧಿಸಿದೆ ನೀನ್ನೈ ಅನ್ನದಾನೀಶ .

ಬೋಧಿಸಿದ ತತ್ವಗಳ ನಿಲ್ಲಿಸಿ |
ವೇದಿಸುವೆ ಜನಸಂಕುಳಕೆ ಸಮ |
ಹೃದಯದರಿದಾಚರಿಸಿಪಡೆಯಲಿ ಮುಕ್ತಿಪಥವೆಂದು ||
ಮುದದಿ ನೀನುಡಿಸೆನ್ನ ಹೃದಯದ |
ಸದನದೊಳುಸಲೆವಾಸಿಸಿಹವರ ಗುರು |
ಪಾಪಕಾರಣ ಪಾಲಕೆರೆ ಗುರು ಅನ್ನದಾನೀಶ ||೪||

## ೩. ಗುರುಪ್ರಾರ್ಥನೆ

ಸದ್ಗುರುವು ನೀನಹುದು ಅಹುದೈ |
ಚಿದ್ಗುರುವು ನೀನಹುದು ಅಹುದೈ |
ಮದ್ಗುರುವು ನೀನಾದಕಾರಣ ನುಡಿಸಜಿಹ್ವೆಯೊಳು ||
ಉದ್ಗಮಿಪಶಬ್ದಂಗಳಿಗೆ ನೀ |
ಸುದ್ಗತದಿ ಕೃಪೆಗೆಯ್ದು ರಕ್ಷಿಸು |
ಗದ್ಗದಸ್ವರದಿಂದ ಬೇಡುವೆ ನನ್ನದಾನೀಶ ||೫||

## ೪. ಗುರು ಕರುಣೆ

ಒಂದು ದಿನ ಚನವೀರದೇವನು |
ಬಂದು ತಮ್ಮಂಘ್ರಿಯನು ಪೊಂದುತ |
ಲಿಂದು ಮತತತ್ವಗಳ ನಿಜದಿರವೆನಗೆ ಬೋಧಿಸುತೆ ||
ಸಂದೆಗವಪರಿಹರಿಸಿ ಸಲಹುವು |
ದೆಂದು ನಿನ್ನಂ ನುತಿಸಲಾಗಳೆ |
ಒಂದೆ ಮನದಿಂ ಪಾಲಕೆರೆ ಗುರು ಅನ್ನದಾನೀಶ ||೬||

## ೫. ಧರ್ಮಬೋಧೆ

ಅವನ ಬೇಡಿಕೆಯನ್ನು ಲಾಲಿಸಿ |
ಜವದಿ ಬೋಧಿಸಿ ರಕ್ಷಿಸಲು ತಾ |
ನವನಕರುಣದಿಕೂರ್ತು ಬೆಸಸಿದ ನಮೃತವಾಣಿಯಲಿ ||
ಶಿವನ ನಿಜದಿರವನ್ನು ತಿಳಿಯಲು |
ಶಿವನ ಶರಣರ ಸೇವೆ ಮಾಳ್ಪುದು |
ಕುವರ ನೀಂ ಕೇಳೆನುತಲುಸಿರಿದ ನನ್ನದಾನೀಶ ||೭||

## ೬. ಸಾಧಕನ ವರ್ತನೆ

ಅವನಾವೊಡುಭವದ ಬೇಗೆಯೊ |
ಈ ವಸುಂಧರೆಯಲ್ಲಿ ಬೇವೊಡೆ |
ಅವನೆ ಪಾಪಿಯು ಕುವರ ನೀ ತಿಳಿ ಇದುವೆ ಶೃತಿಮತವು ||
ಶಿವನ ಶರಣರ ಸೇವೆ ಮಾಡಲು |
ಜವದಿ ನಶಿಪುದು ಪಾಪಸಂಚಯ |
ಅವನೆ ಮುಕ್ತನು ಎಂದು ಬೆಸಸಿದೆ ಅನ್ನದಾನೀಶ || ||೮||

ಪಾಪದಿಂದಲಿ ದುಃಖಬೊಪ್ಪುದು |
ಪಾಪಲೋಪವೆ ಪುಣ್ಯದಾದಿಯು |
ಪಾಪಪರಪೀಡನೆಯು ನೆಸಗಲಿಕೋತು ಬರುತಿಹುದು |
ಪಾಪವದು ಮನವಾಕು ವಪುವಿಂ |
ತಾಪಗೊಳಿಸುವ ತೆರದಿ ಘಟಿಸುವು |
ಪಾ ಪರಿಯ ನಿನಗೊರೆವೆನೆಂದನು ಅನ್ನದಾನೀಶ ||೯||

ಕನಲುತಲಿ ಪರಹಿಂಸೆ ಕಳುವುದು |
ಅನುಚಿತಾ ಹಾರವುಂ ಸನುಮತ |
ದಿನದೊಳನು ತೊರೆಯುತ್ತ ಪರಸತಿಯನ್ನು ಭೋಗಿಪುದು ||
ಇನಿತು ತನುವಿನ ಪಾಪವೆನಿಪುವು |
ತನುಜ ವಚನದ ದೋಷವರಿಪುವೆ |
ನಿನಿತು ನೀ ಕೇಳೆನುತಲುಸಿರಿದ ನನ್ನದಾನೀಶ ||೧೦||

ವಚನದೊಳು ಕಠಿಣೋಕ್ತಿಗಳು ಜನ |
ನಿಚಯದ ನಿಂದೆಯದನೃತ ವಚನ |
ವು ಚಾಡಿ ಮೊದಲಿನಿತುಂ ದೋಷವು ವಚನ ರಚನೆಯಲಿ ||
ಅಚಲದಿಂ ನೆಲಸಿರುವ ಮನುಜರ |
ನೀಚರೆಂದೇ ಕರೆಯಬೇಕಿದ |
ರಾಚರಣ ನಿನಗೊರೆವೆನೆಂದನು ಅನ್ನದಾನೀಶ ||೧೧||

ಮನದಿ ದುರ್ ವಿಷಯಗಳ ಚಿಂತೆಯು ।
ಜನಕೆ ಕೇಡನು ಮಾಳ್ಪದುಶ್ಚಿಂ ।
ತನೆಯು ಪರಸತಿ ಪರಧನಂಗಳ ನೋಡಿ ಬಯಸುತಲಿ ॥
ಎನಿತು ಮನದೊಳು ಶಾಂತಿಯಿಲ್ಲ ದೊ ।
ಡಿನಿತು ದೋಷಂಗಳಿಗೆ ಆಗರ ।
ಮೆನಿಪನವನೇ ಪಾಪಿಯೆಂದನು ಅನ್ನದಾನೀಶ ॥೧೨॥

## ೭. ಕರಣ ಶುದ್ಧಿ

ಮಗನೆ ಪೇಳುವೆನಿನ್ನು ಲಾಲಿಸು ।
ಜಗದೊಳೀ ಕರಣಗಳ ಶುದ್ಧಿಯು ।
ಬಗೆಯು ಶೃತಿತತಿಗಳಲಿ ನಾನಾ ವಿಧದಿ ಪೇಳಿಹುವು ॥
ಹಗರಣದ ಸಂಸಾರವಿದು ಬಹು ।
ಬಗೆಯದಾಗಿರುತಿರುವಕತದಿಂ ।
ಜಗದಿಶೃತಿಮತಭೇದವೆಂದನು ಅನ್ನದಾನೀಶ ॥೧೩॥

ಆದೊಡೆಯುನಿನಗೊರೆವೆಕೇಳ್ಳೈ ।
ಭೇದಗಳು ಅಂತ್ಯದಲಿ ನಿಜವನು ।
ಬೋಧಿಸುವ ಕಾಲದೊಳಗೇಕತ್ವವನು ಪೇಳುವುವು ॥
ನದಿಗಳೆಲ್ಲವು ಹರಿದುಶರಧಿಯ ।
ನೊಡವಿಕೂಡವತೆರದಿಶೃತಿಗಳ ।
ಭೇದಮುಕ್ತಿಯಲಿಲ್ಲವೆಂದನು ಅನ್ನದಾನೀಶ ॥೧೪॥

ಕಾಯದೊಳು ಗುರುಸೇವೆಗೆಯ್ಯುತ ।
ಹೇಯ ಕೃತಿಗಳತೊರೆದು ಶಿವದೀ ।
ಕ್ಷೆಯನು ಪಡೆಯುತ ಸತ್ಕ್ರಿಯಾಚರಣೆಯೊಳುವರ್ತಿಸುತಾ ॥
ಕಾಯವಿದು ಮನುಮಯಮುದಾಯ್ತೆಂ ।
ದಾಯತದಿತಾ ತಿಳಿಯಲದು ನೀ ।
ಕಾಯವೆನಿಪುದದೆಂದು ಬೆಸಸಿದ ನನ್ನದಾನೀಶ ॥೧೫॥

ವಚನದಲಿ ಜಪಿಸುತ್ತ ಮಂತ್ರವ ।
ಸಚಲಿತಾರ್ಥಂಗಳನು ನುಡಿಯುತ ।
ನೀಚಕಾಲಿಣ್ಯಾದಿಶಬ್ದವ್ರಾತಗಳ ಬಿಟ್ಟು ॥
ಅಚಲಿತಾನಂದದೊಳು ವಚನವು ।
ಶುಚಿಯಪ್ಪೊಂದಲು ಸಿದ್ಧಿಯಾಗುವು ।
ರುಚಿತನುಡಿಯೊಳಗೆನುತ ಲುಸಿರಿದ ನನ್ನದಾನೀಶ ॥೧೬॥

ಮನವು ಮಹಲಿಂಗದೊಳುನೆಲಸಲು ।
ಮನದ ಚಂಚಲವಳಿದುಪೋಪುದು ।
ತನುಜನೀ ಕೇಳಿದುವೆ ಮನಸಿನ ನಿಗ್ರಹವದೆಂದು ॥
ಸ್ವಾನುಭಾವದಿ ಪೇಳಿದರು ಸು ।
ಜ್ಞಾನಸಂಪನ್ನಾತ್ಮರಿವನೇ ।
ಸ್ವ್ಯಾನಮಾಗದೆಸಾಧಿಸೆಂದನು ಅನ್ನದಾನೀಶ ॥೧೭॥

ಅಂತುಕರಣದವೃತ್ತಿಯಳಿಯಲು ।
ಸಂತಸದ ಶಿವಪೂಜೆಘಟಿಪುದು ।
ಶಾಂತಮನದಿಂ ಧ್ಯಾನವೆಸಗಲು ಸ್ವಾಂತರಾಳದೊಳೂ ॥
ಕಂತು ಮೊದಲಾದಖಿಳ ರಿಪುಗಳ ।
ಕಾಂತಿಯುಡುಗುತೆ ಪರಮ ಸುಖತಾ ।
ನಾಂತು ಬರ್ಪುದು ಮಗನೆ ಎಂದನು ಅನ್ನ ದಾನೀಶ ॥೧೮॥

## ೮. ಶಿವಯೋಗ

ಐದು ಅಂಗಗಳಿಂದ ಕೂಡಿದ ।
ಮೋದವಹಶಿವಯೋಗವನು ನಿನ ।
ಗಾದರದಿ ಪೇಳುವೆನು ಕೇಳುತ ನೀನು ಆ ವಿಧದೀ ॥
ಸಾಧಿಸುತೆ ಶಿವಯೋಗ ಸುಖವನು ।
ಸಾದರದಿ ನೀಂ ಪಡೆದೆಯಾದೊಡೆ ।
ಮುದನರಿವು ನೀ ನಪ್ಪೆ ಎಂದನು ಅನ್ನದಾನೀಶ ॥೧೯॥

ಧ್ಯಾನವ್ರತ ಶಿವಭಕ್ತಿ ಸಮ್ಯಕ್ |
ಜ್ಞಾನ ಹೆರನರ್ಜನೆಗಳಿನಿಸೀ |
ಸ್ನಾನ ಮಿಲ್ಲದಿಮ್ಮೆಯು ಅಂಗಗಳಿಂದ ಶೋಭಿಸುತ ||
ಮಾನನಿಧಿ ತಾನೆನಿಸಿ ಜಗದೊಳೆ |
ಗೇನ ಜೇಡಿದ ಡೀವ ನಾಕದ |
ಘೇನುವೀ ಶಿವಯೋಗ ಮೆಂದನು ಅನ್ನದಾನೀಶ ||೨೦||

ಧ್ಯಾನವುದು ಶಿವರೂಪ ಚಿಂತಾ |
ಜ್ಞಾನವುದು ಶಿವಯೋಗ ಭಾವನೆ
ಪ್ರಾಣದಿಹಬಕುತಿಯುಂಮ ಶಿವನೊಳ್ ಪ್ರೇಮಪೆನಿಸುವುದು ||
ಸ್ನಾನವಿಲ್ಲದೆ ಶಿವವ್ರತವಾ |
ಕಣಯುಸಾಧನವೊಂದು ತಿಳಿಯೈ |
ತ್ರಿಣಯ ನರ್ಜಾ ಕ್ರಮವಿದೆಂದನು ಅನ್ನದಾನೀಶ ||೨೧||

ಸಗುಣನಿರ್ಗುಣ ವೆರಡು ವಿಧದಲಿ |
ಮಗನೆ ಕೇಳೈ ಧ್ಯಾನ ರೀತಿಯು |
ಸೊಗಯಿಸುವ ಹೃತ್ಕಮಲ ಕರ್ಣಿಕೆಮಧ್ಯಪೀಠದೊಳು ||
ಮಿಗೆ ವಿರಾಜಿಪ ಪಂಚವದನನಾ |
ರಾಗದಿಂಧ್ಯಾನಿಪುದೆ ಸಗುಣವು |
ಬೀಗ ನೀ ತಿಳಿಯೆನುತಲುಸಿರಿದನನ್ನ ದಾನೀಶ ||೨೨||

ಹೃದಯಕಮಲ ವ್ಯಾಪಕತ್ವದ |
ಆದಿ ಅಂತ್ಯಗಳಿಲ್ಲದಿಹ ಜಗ- |
ದಾದಿ ಚಿನ್ಮಯ ಲಿಂಗದೊಳು ಮನವಿರಿಸುತನುದಿನದೀ ||
ಖೇದ ಲವಣಗಳಿರದಂದದಿ |
ಭೇದ ಬವಣೆಯು ನೀಗಲಿಕೆ ತಾ |
ನಿದುವೆ ನಿರ್ಗುಣ ಜಾನವೆಂದನು ಅನ್ನದಾನೀಶ

ಗುರುವಿನಿಂ ಪಡೆದಿರ್ದ ಲಿಂಗವ |
ಕರದಿ ಪಿಡಿದೋರಣದಿ ಪೂಜಿಸಿ |
ನಿರುಕಿಸುತ ತಲ್ಲಿಂಗದೊಳು ಮನ ಲಯವಗೊಳಿಸುತ್ತಾ ||
ನೀರಿನೊಳು ಮುಳುಗಿರ್ದ ಘಟದೊಲು |
ಕರದ ಲಿಂಗವ ಪೊರಗೊಳಗೆ ತಾ |
ನಿರಿಪುದೇ ಮಿಗೆಜಾಣನ ಮೆಂದನು ಅನ್ನದಾನೀಶ ||೨೪||

ಪಂಗನೆ ಜ್ಞಾನದಿ ಅರಿವುಬಪ್ಪುದು |
ಮಿಂಗೆವಿರಾಜಿಪ ಅರಿವು ಬಲಿಯಲು |
ಹಗರಣದ ಸಂಸಾರ ಬಲುಮೆಯುನಾಶವಾಗುವುದು ||
ಸೊಗಯಿಸುವ ಶಿವನರಿವು ಅರತುದ |
ನೀಗಲಾಲಿಸು ತತ್ವಮಸಿವಾ |
ಕ್ಯಗಳ ತಿಳಿನೀನೆನುತಲುಸಿರಿದನನ್ನದಾನೀಶ ||೨೫||

ಲಿಂಗಮದು ತತ್ಪದವುತ್ವಂಪದ |
ಮಂಗಮೆನಿಪುದು ಅಸಿಪದವುತಾ |
ಸಂಗಲಿಂಗಗಳೆರಡು ಕೂಡುವ ಬಗೆಯನರಿಪುವುದು ||
ಅಂಗಲಿಂಗಗಳೇಕವಾಗಲು |
ಲಿಂಗರೂಪನು ತಾನೆಯಾಗುತ |
ಮಂಗಳಾತ್ಮಕನಪ್ಪನೆಂದನು ಅನ್ನದಾನೀಶ ||೨೬||

ತಾನೆ ಶಿವನೆಂದೆನುವ ಭಾವ |
ಜ್ಞಾನದೊಳು ಪೊಳೆಯಲಿಕೆತಾನಾ |
ರೆನುವ ಸಂಶಯುವಳಿದು ಕೃತಿಗಳ ಫಲವಕಾಮಿಸದೇ ||
ತಾನೆ ಸೇವ್ಯನು ತಾನೆಸೇವಕ |
ನೆನುತಲೆರಡನು ಮೀರಿ ಕಾರ್ಯಗ |
ಳೆನೆಸಗುತ್ತಿಹನೆನುತಲುಸಿರಿದ ನನ್ನದಾನೀಶ ||೨೭||

ಮಾಡುತಿಹ ಮಾಟದೊಳು ಶಿವನನು
ನೋಡು ತನ್ನವ ಮರೆದು ಕೃತಿಗಳ |
ಮಾಡುವೆನು ನಾನೆಂಬ ಹಮ್ಮಿದು ತೊಲಗಿ ಸಹಜದೊಳು ||
ಮಾಡುವೆಡೆಯೊಳು ನೋಡುವೆಡೆಯೊಳು |
ನುಡಿವತಾವಿನೊಳಗನುನವರತ |
ಮೃಡನಭಕ್ತಿಯೊಳಿರುವನೆಂದನು ಅನ್ನದಾನೀಶ ||೨೮||

ಏಕಮತಿ ದೃಢವಾಗಲಿಕೆ ಶಿವನೊಳ್ |
ನೇಕ ಮನದಿಂ ವರ್ತಿಸುವ ನಿಜ |
ವ್ಯಕ್ತಿನೊಳು ಸತಿಪತಿಯು ಭಾವದಿ ಪತಿಪರವ ಪಿಡಿದು ||
ಶಾಕಮೈವವ ಮರೆದು ನಿಜದೊಳು |
ಲೋಕ ಹರವಹ ಭಸಿತಮಂತ್ರಾ |
ದಿಕದ ತಳೆದವನೆನುತಲುಸಿರಿದ ನನ್ನದಾನೀಶ ||೨೯||

ಗುರುವು ಲಿಂಗವು ಜರ ಸು ಭಸಿತಂ |
ಪರಮ ಮಂತ್ರವದಕ್ಷಮಾಲಿಯು |
ವರ ಮಹೇಶನ ಪಾದ ತೀರ್ಥಂಗಳೆನು ಪ್ರೊದುತಲಿ ||
ಪರಮ ಪತಿವ್ರತಳೆನಿಸಿ ಜಗದೊಳು |
ಶರಣ ಸತಿಯಿರುತಿರ್ದು ಯಿಲ್ಲದ |
ತೆರವಿ ಭಾಸಿಪಳೆನುತ ಪೇಸಸಿದ ನನ್ನದಾನೀಶ ||೩೦||

ನಿಯಮವ್ರತದೊಳು ನಿಜವನರಿದಾ |
ಕ್ರಿಯುಗಳೊಳು ಸದ್ಭಾವಪೂರ್ವಕ |
ದಾಯತದಿಪೊರಗೊಳಗೆ ಈರ್ವಿಧ ಲಿಂಗಪೂಜೆಯನು ||
ನಿಯತದಿಂ ಮಾಡುವನು ಆದರನು |
ನಯವನಿನಗಾಂ ಪೇಳುವೆನು ಸುಮ |
ತಿಯೊಳು ತಿಳಿದಾಚರಿಸು ಎಂದನು ಅನ್ನದಾನೀಶ ||೩೧||



ಸಗುಣದರ್ಚನೆಯಿಲ್ಲದಲೆತಾ ।
ನಿರ್ಗುಣಾರ್ಚನೆ ಘಟಿಸದದರಿಂ ।
ಸಗುಣಪೂಜೆಯನಾಗಮದ ವಿಧಿಯಂತೆ ಮಾಡುವನು ॥
ನಿರ್ಗುಣದಪೂಜೆಯನು ಹೃದಯದೊ ।
ಳಿಂಗಿದ ಮನುಲಿಂಗದೊಳಗೆಸಗುವ ।
ಬಗೆಯನರಿಪುವೆನೆನುತಲುಸಿರಿದ ನನ್ನ ದಾನೀಶ ॥೩೨॥

ಕಾಂತಿಯುತ ಚಿಲ್ಲಿಂಗ ಮೂರ್ತಿಗೆ ।
ಶಾಂತಿ ಜಲದಿಂ ಸ್ನಾನವೆಸಗುತ ।
ಮುಂತೆತಾಂ ಜಗದಾವರಿಸಿದಾ ವಸ್ತ್ರವನು ತೊಡಿಸಿ ॥
ಕಂತುವೈರಿಗೆ ಶಕ್ತಿಮೂರುವ ।
ತಂತು ಸೂತ್ರದ ಕೂಡಿ ತಾನ ।
ತ್ಯಂತ ಮುದದವದನೆನುತಬಿಸಿಸಿದ ನನ್ನ ದಾನೀಶ ॥೩೩॥

ಜ್ಞಾನಗಂಧದ ಬಕುತಿ ಕುಸುಮದ ।
ಮಾನಸಾದೀಂದ್ರಿಗಳ ಧೂಪದ ।
ಪ್ರಾಣದಿಹಭೂತಗಳ ದಯೆಯೆಂಬಕ್ಷತೆಯ ಧರಿಸಿ ॥
ಮಿನುಗುತಿಹ ನೇತ್ರಗಳ ದೀಪ ।
ಸ್ವಾನುಭಾವದ ಪರಮನೈವೇ ।
ದ್ಯಾನುಕೂಲದಿಯಜಿಸನೆಂದನು ಅನ್ನದಾನೀಶ ॥೩೪॥

ಗುಣತ್ರಿವಿಧದ ತಾಂಬೂಲದಿ ಸುಹ ।
ರಣದಸೋಹಂಕೃತಿ ನಮಸ್ಕಾ ।
ರಾನು ಸಂಧಾನದೊಳು ನೈರಂತರ್ಯವರ್ಜಿಸುವಾ ॥
ತಾನೆತಾನಾಗಿಹ ಪರಶಿವ ।
ಜ್ಞಾನಯೋಗದೊಳಿಂತು ವರ್ತಿಸೆ ।
ಮೂರ್ಖ್ಯಯನದವನೆನುತಲುಸಿರಿದ ಅನ್ನದಾನೀಶ ॥೩೫॥

ಶಿವನೆ ಲಿಂಗಾರ್ಚನೆಯ ಸುವೈಭ |
ವವರಿಯುತಾನೆ ಶಿವನಯೋಗನು ||
ಖವಡೆದು ಲೀಲೆಯನೆಸಗಲು ಶಿವಶರಣರೂಪಿನೊಳು ||
ಭುವಿಯೊಳವತರಿಸುವನುಯೆಂದುಗಿ |
ರುವುದು ಶಿವಸಿದ್ಧಾಂತ ಮುದದಿಂ |
ದಿವನೆ ಹರರೂಪನುತಪಿಸಿಗಿದ ಅನ್ನ ದಾನೀಶ ||೩೬||

## ೯. ಜೀವನು ಶಿವಸ್ವರೂಪ

ಶಿವನು ಭುವಿಯೊಳು ಹೇಗೆ ಜನಿಸುವ |
ನೆವನು ಜಡಜೀವಾತ್ಮನಹನೇ |
ತವೆಸಟಿಯುಭೋಧಿಸುವಿರೆನ್ನಲು ಪೇಳುವೆನು ಕೇಳು ||
ಜೀವನೇಸ್ವಯಮೇವ ಶಿವನಹ |
ನಿವನು ತನ್ನೊಳಗಿರುವ ಸೂಕ್ಷ್ಮದ |
(ಅ) ವಿದ್ಯದಿ ಮೋಹಿಸುವನೆಂದನು ಅನ್ನದಾನೀಶ ||೩೭||

ಬಕುತಿಯೋಳ್ ಪರಿಪಾಕದಿಂ ಮಲ |
ನಿಕರನಾಶಿಸೆ ವಿಮಲ ಗುರು ಪಾ |
ದಕಮಲವಸೇರಿಋಣತ್ರಯಗಳನು ತೊರೆಯುತಲಿ ||
ಸುಕೃತ ದಿಂ ಗುರುಸೇವೆಗೆಯ್ಯುತ |
ಲೇಕಮನದಿಂ ವರ್ತಿಸಲು ಗುರು |
ವಿಕಸ ಮನದಿಂ ಪೊರೆವನೆಂದನು ಅನ್ನದಾನೀಶ ||೩೮||

ಮೂರು ತನುವಿನ ಮರೆಯೊಳಡಗಿದ
ಮೂರು ಮಲಗಳ ಕಳೆಯಲೋಸುಗ |
ಮೂರು ವಿಧ ದೀಕ್ಷೆಗಳನೆಸಗುವನದರ ವಿವರವನು ||
ಒರೆವೆ ಲಾಲಿಸು ಕರುಣದಿಂ ಕರ |
ಸರಸಿರುಹವಂ ಮಸ್ತಕದ ಮೇ |
ಲಿರಿಸೆ ವೇಧಾ ದೀಕ್ಷೆಯೆಂದನು ಅನ್ನದಾನೀಶ ||೩೯||

ಅದುವೆ ಕಾರಣ ದೇಹ ಶುದ್ಧಿಯು |
ಪದುಳದಿಂ ಗುರುಮಂತ್ರವರಿಪಲಿ |
ಕಿದುವೆ ಅಭ್ಯಂತರದ ಶುದ್ಧಿಯು ಮಂತ್ರಮಯ ದೀಕ್ಷೆ ||
ಸದಯದಿಂ ಗುರುಕಾಯ ಶುದ್ಧಿಯ |
ನೊದವಿಸುತ ಶಿವಲಿಂಗಮಂ ಕೊಡ |
ಲಿದು ಕ್ರಿಯೆಯ ಸುದೀಕ್ಷೆ ಎಂದನು ಅನ್ನದಾನೀಶ ||೪೦||

ದೇಹದೊಳು ಹುದುಗಿರ್ದ ಆಣವ |
ದಹನದಿಂ ತನುಮಂತ್ರಮಯವಾ |
ಗಿಹುದರಿಂ ಶುದ್ಧ ಪ್ರಸಾದವದಹುದು ನೀ ಕೇಳು ||
ಮೋಹನಾಶದಿ ಮನ ಪ್ರಸನ್ನದ |
ಗೇಹವೆನಿಸಿರೆ ಸಿದ್ಧ ಶೇಷವಿ |
ದಹುದು ಎನುತಲಿ ಒಸೆದು ಬೆಸಸಿದ ನನ್ನದಾನೀಶ ||೪೧||

ಭಾವದೊಳು ಹುದುಗಿರ್ದ ಕರ್ಮದ |
ನೋವ ತಾರಿಸಿ ಸುಖದ ಸಮರಸ |
ವೀವ ಸಮ್ಯಕ್ ಜ್ಞಾನದಿಂ ಸದ್ಭಾವ ಶೇಷವಿದು ||
ಭಾವಮನ ಕಾಯಗಳ ಶುದ್ಧಿಯು |
ತೀವಿ ಗುರುಕಾರುಣ್ಯದಿಂದಾ |
ಶಿವನೆ ತಾ ಶಿವಯೋಗಿಯೆಂದನು ಅನ್ನದಾನೀಶ ||೪೨||

## ೧೦. ಷಟ್ ಧಾತುಗಳ ಮಂತ್ರ ರೂಪ

ತ್ವಚೆಯು ಓಂಕಾರವನು ರುಧಿರದ |
ರುಚಿರದನಕಾರವನು ಮಾಂಸದ |
ಉಚಿತದಮಕಾರವನು ಶಿಕಾರವನು ಮೇಧಸದೀ ||
ಶುಚಿಯುವಾಕಾರವನು ಅಸ್ಥಿಯ |
ಖಚಿತಸುಯಕಾರವನು ಮಜ್ಜೆಯೊ |
ಳಚಲಿತದಿಧರಿಸಿರ್ಪನೆಂದನು ಅನ್ನದಾನೀಶ ||೪೩||

## ೧೧. ಇಂದ್ರಿಯಗಳ ಲಿಂಗರೂಪ

ನಾಸಿಕದೊಳಾಚಾರ ಲಿಂಗವ |
ರಸನೆಯೊಳು ಗುರುಲಿಂಗ ನಯನದಿ |
ಭಾಸಿಸುವ ಶಿವಲಿಂಗ ಚರಲಿಂಗವನು ಚರ್ಮದಲಿ ||
ಎಸೆವ ಕರ್ಣದಿ ಶೇಷ ಲಿಂಗವ |
ವಸವು ಮಹಲಿಂಗವನು ಹೃದಯದೊ |
ಳೊಸೆದು ಧರಿಸಿಹನೆನುತ ಬೆಸಸಿದ ನನ್ನ ದಾನೀಶ ||೪೪||

## ೧೨. ಶಿವಯೋಗಿ

ಇವನೆ ಪರಶಿವ ಸಕಲರೂಪನು |
ಭಾವಿಸಲು ಶಿವನಾಗಿ ಶಿವನನು |
ಬುವಿಯೊಳಗೆ ಸದ್ಭಕ್ತಿಯಿಂದರ್ಚಿಸುವ ಶಿವಯೋಗಿ ||
ಇವನ ಮಹಿಮೆಯ ನಖಿಳವೇದಗ |
ಳಾವಗಂ ಉಗ್ಘಡಿಸುತಿಹವಾ |
ಶಿವನೆ ಈ ಶಿವಶರಣನೆಂದವನು ಅನ್ನದಾನೀಶ ||೪೫||

ಅವರವರ ಭಾವನೆಯ ಪರಿಯೊಳೆ |
ಗವರವರತೆರನಂತೆ ತೋರುವ |
ನೀವಿಮಳ ಶಿವಯೋಗಿ ಮಹಿಮೆಯನಾರು ಅರಿದಪರು
ಅವರೆ ಧನ್ಯರು ಅವರೆ ಸುಕೃತಿಗ |
ಳವರ ಪೂರ್ವದ ಸುಪುಣ್ಯಫಲನಿತೆ |
ಯು ವರ್ಣಿಸಲಿ ಕರಿದೆನುತುಸಿರಿದ ನನ್ನ ದಾನೀಶ ||೪೬||

ಇವನ ಪಾದಾಂಗುಷ್ಠದೊಳು ಸಕ |
ಲಾವನಿಯ ತೀರ್ಥಂಗಳಿಹ ವಿ |
ಪಾವನದ ಪಾದೋದಕದ ಸೇವನೆಯ ಪುಣ್ಯವನು ||
ಆವಸುಕೃತಿಯು ಪೊಂದುವನೊ ಅವ |
ನೀವಸುಂಧರೆಯಲ್ಲಿ ಪಾವನ |
ಜೀವಿ ಎನಿಸುವನೆನುತ ಬೆಸಸಿದ ನನ್ನ ದಾನೀಶ ||೪೭||

## ೧೩. ಅಷ್ಟಾವರಣ ಪಂಚಾಚಾರ

ಈ ಮಹಾಶಿವಯೋಗಿದೇಹದೊ |
ಳಮಲದಷ್ಟಾವರಣ ಹರಣದ (ಅ)
ಸಮದಪಂಚಾಚಾರವಾತ್ಮದಿ ಷಟ್‌ಸ್ಥಲನಿವಹ |
ಅಮಿತತೇಜದಿ ವಾಸಿಸಿಹವಾ |
ಕ್ರಮವನಿನಗಾನೊರೆವೆ ಕೇಳೈ |
ವಿಮಲದಷ್ಟಾವರಣವೆಂದನು ಅನ್ನದಾನೀಶ ||೪೮||

## ೧೪. ಗುರು

ಅರಿವಿನಿಂ ಆಚಾರ ಮದರಿಂ |
ಗುರುವು ಗುರುಕೃಪೆ ದೊರೆಲಿಂಗವು
ದೊರೆವುದಾಗುರು ಲಕ್ಷಣವ ಪೇಳುವೆನು ನೀಕೇಳು ||
ವಿರತಿವಿತರಣ ಭೂತಕರುಣಾ |
ಪರತಿಶಾಸ್ತ್ರವಿಚಾರಪರಿಣತಿ |
ತೋರುತಿರೆ ಗುರುವಪ್ಪನೆಂದನು ಅನ್ನದಾನೀಶ ||೪೯||

ಮೆರೆವ ಆಸ್ತಿಕ ಬುದ್ಧಿ ನಿಯಮದೊ |
ಳಿರುತ ಶೌಚವ್ರತದಿ ಸದ್ಗುಣ |
ಭರಿತ ನಿಜಲಿಂಗೈಕ್ಯ ನಿಷ್ಠೆಯ ವೀರವೃತ್ತಿಗಳ ||
ಧರಿಸಿ ಜಗದೊಳು ಚರಿಸಿ ಬೋಧೆಯ |
ನೊರೆದು ಪಾವನಗೊಳಿಸಿ ರಾಜಿಪ |
ಪರಮ ಗುರುವಿವನೆನುತ ಉಸಿರಿದ ನನ್ನದಾನೀಶ ||೫೦||

ಗುರುವು ದೀಕ್ಷಾ ಶಿಕ್ಷೆ ಅನುಭಾ |
ವರೂಪದಿ ಸಚ್ಛಿಷ್ಯ ರನ್ನುಭ |
ವರೋಗದಿ ರಕ್ಷಿಸುತ ಸಮ್ಯಜ್ಞಾನಸುಧೆ ನೀಡಿ ||
ಪರಮ ಶಿವಭಕ್ತಿಯನು ಕರುಣಿಸಿ |
ಪೊರೆವಮಹಗುರುವರನ ಮಹಿಮೆಯ |
ನೊರೆವೆ ಕೇಳೆಂದೆನುತ ಬೆಸಸಿದ ನನ್ನದಾನೀಶ ||೫೧||

ಶಿವನೆ ಗುರುರೂಪವನು ಧರಿಸುತ |
ಭವನಿಯೊಳು ನರರಂತೆ ತೋರುವ |
ಶಿವನ ಚರಣದಿ ಮೂರು ಲೋಕವು ವಾಸವಾಗಿಹವು ||
ಇವನ ಪಾದಾಂಗುಷ್ಠದೊಳಗೆ ಸು |
ಪಾವನವಾರಿಯುಲಿಸು ತೀರ್ಥವಿ |
ಹವಿಪಸಲಿತಿಳಿ ಎನುತ ಬೆಸಸಿದ ನನ್ನ ದಾನೀಶ ||೩೨||

ಪಾದ ತಳದೊಳು ಸಪ್ತಸಾಗರ |
ಪಾದಮೂರ್ಧ್ವದಿ ಪರ್ವತಂಗಳು |
ಸುವೃಕ್ಷನಲ್ಲಿ ತತ್ವಷಟ್‌ತ್ರಿಂಶಮಾಗುಭಯಜಾನುಗಳ ||
ಸವನದೊಳು ದೇವತೆಗಳಿರುತಿಹ |
ದಿಮವೆ ಗುರು ವಿನ ವಿಶ್ವರೂಪವು |
ಇವನು ತಿಳಿನೀನೆನುತ ಉಸಿರಿದ ನನ್ನ ದಾನೀಶ ||೩೩||

ಸರ್ವ ತತ್ವದ ನಿಲಯನನುಪಮ |
ಸರ್ವಕಾಧಾರಸ್ವರೂಪನು |
ಸರ್ವವಿದ್ಯಾಗೇಹನಿತ್ಯನು ನಿರ್ವಿಕಲ್ಪಕನು ||
ಸರ್ವಭೂತನಿಯಾಮಕನುತಾ |
ಸರ್ವ ತತ್ವಗಳು ಪರಿಯೊಳಗಿರು |
ತುರ್ಯದೊಳು ಗುರುವೆನಿಪನೆಂದನು ಅನ್ನ ದಾನೀಶ ||೩೪||

## ೧೫. ಲಿಂಗ

ಲಿಂಗಸಂಬಂಧವನು ಶಿಷ್ಯನ |
ಅಂಗದೊಳು ಸಲೆ ಧರಿಸಿ ಮೂರ್ಮಲ |
ಸಂಗಮಂತೊಡೆಯುತ್ತ ಕೀಟಭ್ರಮರ ರೀತಿಯೊಳು ||
ಅಂಗಸಂಗವ ಬಿಡಿಸಿ ಪಾವನ |
ಲಿಂಗ ಸಂಗದೊಳಿರಿಸಿ ರಕ್ಷಿಸೆ |
ಮಂಗಳಾತ್ಮಕ ದೀಕ್ಷೆ ಎಂದನು ಅನ್ನದಾನೀಶ ||೩೫||

ಪರಶಿವನೆ ಗುರುಲಿಂಗಜಂಗಮವೂ |
ಧರೆಯೊಳು ಭಾಸಿಸಲಾದ ಕಾರಣ |
ಮೂರು ವಸ್ತುಗಳೇಕವೆನೆ ನಿಜಮುಕ್ತಿ ಕಾರಣವು ||
ಅರಿವು ಆಚಾರಗಳ ಮಿಲನವೆ |
ವೀರಶೈವದ ಪರಮ ಗುರಿ ಎನು |
ತೊರೆಯಲಿದುವೇ ಶಿಕ್ಷೆ ಎಂದನು ಅನ್ನದಾನೀಶ ||೫೬||

ಭಕ್ತಿಶುದ್ಧಾರ್ಜನೆಗಳಿಂದಿಂಗೆ |
ಭಕ್ತತೆಯು ಸಂಸ್ಕಾರದಿಂ ಸ |
ದ್ವ್ಯಕ್ತಿ ಸುಶ್ರವಣಾದಿ ಸನ್ಮಾರ್ಗಾನು ವರ್ತನದ ||
ಯುಕ್ತಿಯಿಂ ಸ್ವಾತ್ಮದೊಳು ನಿಜದ |
ವ್ಯಕ್ತದನುಭಾವೈಕ ಸುಖಕು |
ದ್ವ್ಯಕ್ತಕನುಭವವೆನಿಪುದೆಂದನು ಅನ್ನದಾನೀಶ ||೫೭||

ಪರಮಪಾರಸುಖಾಂಬುನಿಧಿಯುಃ |
ಗುರುವು ತನ್ನ ಸು ಲೀಲೆಯಿಂದೀ |
ಮೂರು ವಿಧ ರೂಪಗಳ ಧರಿಸುತ ಶರಣನಂಗದೊಳು ||
ತೋರುತಿಹ ಶಿವಲಿಂಗದೊಳು ಕೃಪೆ |
ವೆರಸಿಸಲಿ ಭಾಸಿಸುತ ಪಾವನ |
ದರಿವ ಬೋಧಿಸುತಿರುವನೆಂದನು ಅನ್ನದಾನೀಶ ||೫೮||

ಸನ್ನಿಯಿಂಶೈವಾಗಮಂಗಳು |
ಮುನ್ನ ಪೇಳಿದ ಲಿಂಗ ಘನತೆಯು |
ನಿನ್ನ ನಿನಗಾಂ ಪೇಳುವೆನು ಕೇಳೇಕ ಚಿತ್ತದೊಳು ||
ಚನ್ನಮಹ ಗುರು ಕರುಣದಿಂ ಪಡೆ |
ಪುನ್ನತಾನಂದದೊಳು ನಿಜ ಪದ |
ವನ್ನು ಶರಣರು ಬೆರೆದರೆಂದನು ಅನ್ನದಾನೀಶ ||೫೯||

ನಾದರೂಪನು ಶಿವನು ಆ ಮಹ ।
ದಾದಿ ಶಕ್ತಿಯು ಬಿಂದು ರೂಪಿಣಿ
ಮೋದದಿಂದಾನಾದ ಬಿಂದುಗಳೆರಡು ಕೂಡಲಿಕೆ ॥
ನಾದರದ ಕಳೆ ಎನಿಪುದಾ ಕಳೆ ।
ಭೇದವಿರಹಿತ ಮೆನಿಸಿ ಸೂಕ್ಷ್ಮದ ।
ಲಿ ದೇಹದುಪರಿಯೊಳಿಹುದೆಂದನು ಅನ್ನದಾನೀಶ ॥೬೦॥

ನಿರದ ಸಾಸಿರ ದಳದ ಚಿತ್ಕಳೆ ।
ಗುರು ನಿರೂಪದಿ ಭಾವಕೆಯ್ದು ತ ।
ಪರಮ ನಿಷ್ಕಲಭಾವ ಲಿಂಗವುವೆನಿಸಿತಾನಿರದಿ ॥
ಪರಿದುಮನದೊಳು ಬೆಳೆದು ಹರಣದೊ ।
ಳಿರುತ ನಿಷ್ಕಲ ಸಕಲವೆನಿಸಿಸು ।
ತ್ತಿರದಿ ಸಕಲವನೆಯ್ದುತೆಂದನು ಅನ್ನದಾನೀಶ ॥೬೧॥

ಸ್ಥೂಲದೊಳು ಸಾಕಾರ ರೂಪದ ।
ತಾಳುತಲಿ ದೇಹದೊಳು ತುಂಬಿ ।
ಸ್ಥೂಲಲಿಂಗವುವೆನಿಸಿ ತಾನೊಳ ಹೊರಗೆ ತೋರುತಿಹ ॥
ಸ್ಫೋಟಿಕ ಪಟಿಕದೊಳಗಿಹ ದೀಪ ।
ಜ್ವಾಲೆಯಂದದೊಳಿಷ್ಟಲಿಂಗದ ।
ದೊಳಹೊರಗೆ ತಾಪ್ರೊಳೆವುದೆಂದನು ಅನ್ನದಾನೀಶ ॥೬೨॥

ಲಿಂಗದಬ್ಬಪ್ರ ವಿಳಯ ಪರಿಣಾ ।
ಮಂಗಳನು ತಳೆದಿರ್ಪುದೀಘನ ।
ಲಿಂಗ ಸರ್ವಾಧಾರ ಮನುಪಮ ನಿತ್ಯ ನಿರ್ಮಲವು ॥
ಮಂಗಳಪ್ರದ ನಿರಾಕಾರವಿ ।
ದಂಗ ಹೃದಯಂ ನಿರ್ಗುಣಂಸಲೆ ।
ಸಂಗವಿರಹಿತ ವೆನಿಪ್ಪುದೆಂದನು ಅನ್ನದಾನೀಶ ॥೬೩॥

ತನ್ನ ಭಕ್ತರಿಗಿಷ್ಟಸಿದ್ಧಿಯ
ನುನ್ನತೋನ್ನತ ರೀತಿಯಿಂದಲಿ
ಚನ್ನ ಕೈಗೂಡಿಸುವಕಾರಣ ವಿಷ್ಟ ಲಿಂಗವದು
ಸನ್ನುತವ ಪೆಸರಾಂತು ಶರಣರ
ಹೃನ್ನಿಲಯದಷ್ಟ ಮಿನಿಸಿ ನಿತ್ಯದ (ಅ)
ಛಿನ್ನ ರೂಪದೊಳಿರ್ಪುದೆಂದನು ಅನ್ನದಾನೀಶ ||೬೪||

## ೧೬. ಜಂಗಮ

ಜಂಗಮದ ಲಕ್ಷಣವ ಪೇಳುವೆ
ನಂಗವಿಸಿ ನೀಂ ಕೇಳು ಪರತರ
ಮಂಗಳಾತ್ಮಕ ಜಂಗಮವೆ ಘನಲಿಂಗ ಮುಖವೆಂದು
ಪಿಂಗದಿಹಶೈವಾಗಮಂಗಳು
ಡಂಗುರವ ಬಾರಿಸುವ ವೀಜರ
ಲಿಂಗವೇ ವ್ಯಾಪಕವು ಎಂದನು ಅನ್ನದಾನೀಶ ||೬೫||

ಸಂಚಿತ ಪ್ರಾರಬ್ಧ ಕರ್ಮವ
ವಂಚಿಸುತ ನಿಜಲಿಂಗ ನಿಷ್ಠೆಯ
ಪಂಚಮುದ್ರೆಗಳಿಂದ ಕೂಡಿ ವಿರಾಗ ಭಾವದೊಳು
ಪಂಚಪಾಶಗಳನ್ನು ಛೇದಿಸಿ
ಸಂಚರಿಪ ಶಿವಯೋಗಿ ತಾ ಘನ
ಕಾಂಚನವ ನುಳಿದಿರ್ಪನೆಂದನು ಅನ್ನದಾನೀಶ ||೬೬||

ಕಾಮ ಮೊದಲಾದ ವಿಳೆ ರಿಪುಗಳ
ನಾಮಹಾಜ್ಞಾನಾಗ್ನಿಯೊಳು ನಿಃ
ಸೀಮತನದಿಂ ದಹಿಸಿ ನಿಶ್ಚಿಂತತೆಯ ರೂಪದೊಳು
ಭೂಮಿ ಕಾಮಿನಿಗಳನು ಇಚ್ಛಿಸ
ದಾ ಮಹಾ ಶಿವಯೋಗದೊಳು ಬಹು
ಸಮತೆಯನು ತಳೆದಿರ್ಪನೆಂದನು ಅನ್ನದಾನೀಶ ||೬೭||

ಜ್ಞಾನ ಆಚಾರಗಳ ಸನ್ಮಿ
ಸನದಿ ಪಿಡಿದಾ ಸ್ಥಲಗಳಾರುವ
ನು ನಿಜನಿವಾಸದೊಳಿರಿಸಿ ಚರಿಪ ಭೂಮಿಪಾವನಕೆ ॥
ಜ್ಞಾನಿಯಾದೀ ಜಂಗಮನ ಬಹು
ಮಾನದಿಂ ವರ್ಜಿಸುವ ಮನುಜನು
ತಾನೆ ಧನ್ಯತಿಸಡೆವನೆಂದನು ಅನ್ನದಾನೀಶ ॥೬೮॥

ಭ ನವಿಕಾರವಿದೂರ ಚರವರ
ಗ ವಿಕಲಾತ್ಮಕನೆನಿಪ ಸುಪರಶಿ
ವ ವಿಷ್ಣೆಯೆ ಸತಿ ಸೋದವೇ ಸುತವಿರತಿಯೇ ಬಂಧು ॥
ಪಾವನಾತ್ಮಕ ಭಕ್ತಿ ತಾನೆ ಪ
ರನೆನಿಪ ಮಾತೆಯು ಅಮಲ ಸತ್ಕ್ರಿ
ಯು ವದು ಪಿತರೂಪೆನಿಪ್ಪನೆಂದನು ಅನ್ನದಾನೀಶ ॥೬೯॥

ಶಾಂತಿಯೇ ಸಖ ಸತ್ಯವೇ ಸುತ
ನಿಂತು ಸದ್ಭಕ್ತಿಯೇ ಸೊಸೆಯು ತನ್ನೊಳ
ಗಾಂತ ಸದ್ಗುಣ ಗಣವೆ ಪೌತ್ರರು ತನ್ನರಿವೆ ದೇಹ ॥
ಮುಂಕಿಸುವಿಚಾರವೇ ಕ್ಷೇತ್ರವು
ಸಂತಸಾನ್ವಿತ ದಮವೆ ಗುರು ನಿ
ಶ್ಚಿಂತ ಮುಕ್ತಿಯೆ ದೇಶವೆಂದನು ಅನ್ನದಾನೀಶ ॥೭೦॥

## ೧೭. ಭಸ್ಮ

ಇನ್ನು ಭಸಿತದ ಘನತೆ ಪೇಳುವೆ
ಸನ್ನುತಾಗಮನಿವಹ ವಚನದೊ
ಳುನ್ನತೋನ್ನತ ರೀತಿಯಿಂ ಪೇಳಿಪೆನವದನೀಗ ॥
ವನ್ನಿಯಿಂದೀಕರಣ ನಾಗಕೆ
ಚನ್ನನಾಲ್ಕನೆ ಹೊದಿಕೆ ಎನಿಪ್ಪುದು
ಇನ್ನು ಕೇಳೆಂದೆನುತಲುಸಿರಿದ ನನ್ನದಾನೀಶ ॥೭೧॥

ಭೂತಿ ಭಸ್ಮ ಕ್ಷಾರ ರಕ್ಷೆ ಭ ।
ಸಿತವೆನಿಪವೇ ಪಂಚಪೆಸರಿ ನಿ ।
ತ್ಯ ತನುಭಸಿತಕೆ ವೀರಕ್ತಿಯಾಗಮವು ಪೇಳುವುದು ॥
ಶ್ವೇತವರ್ಣದ ಕಾಂತಿಯಿಂ ತಕೆ ।
ದ್ಯೋತು ಪರಿಶೋಭಿಸುವ ಶಿವ ತನು ।
ಚೇತನವೆ ಧಾರಣವದೆಂದನು ಅನ್ನದಾನೀಶ ॥೬೭॥

ಪಂಚವದನದೊಳುದಿಸಿ ಮುದದಿಂ ।
ಪಂಚಕಲಿಗಳ ತಳೆದು ತಾ ನಿಜ ।
ಪಂಚಾಕ್ಷರವೆರಸಿ ಚರಪದಸಲಿಲವನು ಕೂಡಿ ॥
ಪಂಚವಿಧಪುರುಷಾರ್ಥಗಳ ನಿ ।
ರ್ವಂಚಕತ್ವದಿ ಕೊಡುವಭಸಿತವ ।
ಕೊಂಚಧರಿಸಲು ಮುಕ್ತನೆಂದನು ಅನ್ನದಾನೀಶ ॥೬೮॥

ಏನುಜನ್ಮದ ಪಾಪವಾದಡು ।
ಭಸಿತಲೇಪನ ಮಾತ್ರದಿಂದಲೆ ।
ನಶಿಸಿ ಶಿವಪದಲಭಿಸಿ ನಿಜಸುಖವೊಂದುವುದು ನಿಜವು ॥
ಬಸವ ಮೊದಲಾದಾ ಪ್ರಮಥರುಂ ।
ಭಸಿತ ಘನತೆಯನರಿದು ಧರಿಸುತ ।
ಲೊಸೆದು ನಿಜದೊಳುಬೆರೆದರೆಂದನು ಅನ್ನದಾನೀಶ ॥೬೯॥

ಮೂರುವಿಧ ವಸ್ತುಗಳೆನರ್ಚಿಸೆ ।
ಕಾರಣವದೀ ಭಸಿತವಿದನುಳಿ ।
ದಿರುವ ಕಾರ್ಯವು ಸಫಲವಾಗದು ಸರ್ವಮಂಗಲಕೆ ॥
ದಾರಿಯನು ತೋರಿಸುವ ಕಾರಣ ।
ದುರಿತನಾಶಕ ಸುಖವಿಧಾಯಕ ।
ಶರಣಜನ ಹೆರುಮಾಂಕವೆಂದನು ಅನ್ನದಾನೀಶ ॥೭೦॥

ಕುಸುಮವಿಲ್ಲದ ವನವು ವರಹಿಗ ।
ವಸತಿ ಇಲ್ಲದ ಗೂಡು ನಿಜಸುಖ ।
ಪೆಸಕವಿಲ್ಲದ ತಪವು ಸವಿನೀರಿಲ್ಲದಾಬಾವಿ ॥
ನಾಸಿಕವ ಬಿಡದ ಮುಖ ಹಣೆಯೊಳು
ಭಸಿತಧರಿಸದ ಮನುಜ ಜೀವನ
ಮಿಸೆದು ಶೋಭಿಸದೆನು ತಿಳುಹಿದ ನಿನ್ನ ದಾನೀಶ ॥೭೬॥

## ೧೪. ರುದ್ರಾಕ್ಷ

ಶರಣ ತನ್ನಯ ಲೀಲೆಯಿಂದೀ ।
ಕರದೊಳ್ಪಿದನೆ ಹೊದಿಕೆಯಂತಳಿ ।
ದಿರುವನದುಳಿವನಕ್ಷಿ ಇರದೀ ಭೂಮಿಪಾವನಕೆ ॥
ಭೂರುಹದ ಬೀಜವು ನಿರುತವೆನಿ ।
ಸಿರುವ ರುದ್ರಾಕ್ಷವೇತಾನದು ।
ಅರಿವಿನಾಗರ ವೆನಿಪುದೆಂದನು ಅನ್ನದಾನೀಶ ॥೭೭॥

ಹರನು ಮೂರ್ಪುರ ದಹನದೊಳಗನ ।
ವರತವೀಕ್ಷಿಸಲಾಪುರಂಗಳ ।
ಮೂರು ನಯನದ ಸಲಿಲಧರೆಯೊಳುಪತನವಾಗುತಲಿ
ಧರಿಸಿ ರುದ್ರಾಕ್ಷಾಂಕನಾಮವ ।
ಶರಣ ಜನರಾಭರಣವೆನಿಸುತ ।
ಧರೆಯೊಳನುದಿನ ಮೆರ್ಪುದೆಂದನು ಅನ್ನದಾನೀಶ ॥೭೮॥

ಮಣಿಯಮೂಲವೆಬ್ರೊಮ್ಮ ವೆನಿಪುದು ।
ಮಣಿಯನಾಳವೆ ವಿಷ್ಣುವೆನಿಪುದು ।
ಅನಘ ರುದ್ರಾಕ್ಷ ಮುಖವದುವೇ ರುದ್ರನೆನಿಸುವುದು ॥
ಮಣಿಯಕೇಸರದಿವಿಜನಿಸರವು ।
ಎನಿಪಮಣಿಯನು ಭಕ್ತಿಯಿಂತನು ।
ವಿನೊಳು ಧರಿಸಿತೆ ಧನ್ಯನೆಂದೆನು ಅನ್ನದಾನೀಶ ॥೭೯॥

## ೧೯. ಮಂತ್ರ

ಇಂತು ಕರಣವು ತನ್ನ ದೇಹಮೋ |
ಳಾಂತು ರುದ್ರಾಕ್ಷ ಮಾಸಾಲೆಯ |
ಶಾಂತಮನದಿಂ ಮಂತ್ರವನು ಜಪಿಸುವನು ಕೇಳದರ ||
ಸಂತಸಾನ್ವಿತ ವಿಷಯವನು ಅ |
ತ್ಯಂತ ಗೋಪ್ಯವದೆನಿಪ ಶಿವನುಪ |
ದಿಂತು ತಂತ್ರವನುಸಿರಿದನು ಅನ್ನದಾನೀಶ ||೮೦||

ಐದು ಅಕ್ಷರವೆನಿಸಿದ ಮಂತ್ರವಿ |
ದೊದವಿತಾನೋಂಕಾರವನುಕೂ |
ಡಿದುವೆ ಆರಕ್ಷರದಿ ಶೋಭಿಪ ಮಂತ್ರರಾಜನೆನೆ ||
ವೇದವದು ಉಗ್ಘಡಿಪಕಾರಣ |
ಸಾಧಕರ್ಗಿದು ಭೋಗಮೋಕ್ಷದ |
ವಿಧಾಯಕವೇ ಎನುತ ಉಸಿರಿದ ನನ್ನ ದಾಸೀಶ ||೮೧||

ಜೀವ ಶಿವೈಕ್ಯತೆಯು ಬೋಧಿಸಿ |
ತೀವಿ ಸೂಕ್ಷ್ಮಾತ್ರ ಸೂಕ್ಷ್ಮದಲಿ ರೂ |
ಪವನು ಭೇದಾತ್ಮವಿಭೇನಾಮಾಂಕಿತವ ತಳೆಯುತಲಿ ||
ಶಿವನ ಭಕ್ತರಿಗಿಷ್ಟಸಿದ್ಧಿಯ |
ನವಿಕಲತೆಯಿಂ ಕೊಡುವಶಿವನುಂ |
ತ್ರವನು ಪಡೆದವ ಧನ್ಯನೆಂದನು ಅನ್ನದಾನೀಶ ||೮೨||

ಗುರುವಿನಿಂ ದೀಕ್ಷೆಯುಸಲೆ ಪಡೆದ |
ನುರಾಗದಲೀ ಮನುವ ಪಡೆಯು |
ತ್ತ ರಾಗದ್ವೇಷಗಳ ಕಳೆದತಿ ನಿಷ್ಠೆಯಿಂ ಜಪಿಸಿ ||
ಭೂರಿನಿತ್ಯಾನಂದಪದಕ್ಕೆ |
ಸೇರಿಸಾಯುಜ್ಯವನು ಪೊಂದುತ |
ಹರನೆ ತಾನಹ ನೆನುತಲುಸಿರಿದ ನನ್ನ ದಾಸೀಶ ||೮೩||

## ೨೦. ಪಾದೋದಕ

ಮೋದದಿಂ ಘನಮೂರು ವಸ್ತುಗ|
ಳಾದಗುರು ಶಿವಚರರ ನರ್ಚಿಸಿ|
ಪಾದತೀರ್ಥ ಸುರೇಖರೂಪದ ಫಲಪ್ರೊಂದುತಲಿ||
ಛೇದಿಸುತಲಜ್ಞಾನ ಕರ್ಮವ|
(ಆ) ನಾದಿ ನಿಜರೂಪವನು ಪಡೆಯುವ
ನೀ ದಯಾನಿಧಿ ಶರಣನೆಂದನು ಅನ್ನ ದಾಸೀಶ ||೮೪||

ಜ್ಞಾನವಾಗರ ಮನಿಪ ಶರಣನು
ವಿನಯದಿಂ ಚರಲಿಂಗದಡಿಯಂ|
ಪಾಣಿಯಿಂ ಪಿಡಿದರ್ಚಿಸುತ ಪತಿಭಕ್ತಿಯಿಂ ನಮಿಸಿ||
ದಾಣಿಪತಿ ಚಕ್ರದೊಳು ಹುದುಗಿದ|
(ಆ) ನೂನಪಾದೋದಕವನಡಿಯಿಂ|
ತಾನುಪ್ರೊಂದುವನೆನುತಲುಸಿರಿದ ನನ್ನ ದಾಸೀಶ ||೮೫||

ಪಾದತೀರ್ಥವದನಘವನುಪನು|
ವೃದಶವಿಧದಲಿ ಭಾಶಿಪ್ರಮುಚಿತ್
ಸಧೆಯು ಪೆಸರಿಂ ಶರಣನಿಷ್ಟಾರ್ಥವನು ಈಯುಲಿಕೇ||
ಸಾಧನೆಯು ಶರಣ ಭಿನ್ನತೆಯಾ
ನದಲಿ ತಾ ಫಲವಿಚ್ಛಿ ಪಡೆಯುದ|
(ಆ) ಭೇದತನದಿಂ ಚರಿಪನೆಂದನು ಅನ್ನದಾಸೀಶ ||೮೬||

## ೨೧. ಪ್ರಸಾದ

ತಾನುಭೋಗಿಪ ಸಕಲ ವಸ್ತುವ|
ಮಾಣದಲಿ ಗುರು ಚರರಿಗರ್ಪಿಸಿ|
ಮನದ ಚಂಚಲತೆಳಿದು ತಚ್ಛೇಷವನು ಜಾಗ್ರತದೀ||
ಜ್ಞಾನದಿಂ ಚಿಲ್ಲಿಂಗಕರ್ಪಿಸಿ|
ತಾನುಭೋಗಿಸಲದುವೆ ಸಮ್ಯಕ್
ಜ್ಞಾನದಾಯಕ ಶೇಷವೆಂದನು ಅನ್ನ ದಾಸೀಶ ||೮೭||

## ೨೨. ಅಂಗಲಿಂಗ ಸಮರಸ

ಅಂಗಲಿಂಗದೊಳೆರಕವಾಗಲು |
ತುಂಗಲಿಂಗಾಂಗೈಕ್ಯವೆನಿಸುತ |
ಸಂಗವಿರಹಿತವೆನಿಸಿ ಲಿಂಗದರೂಪ ಧರಿಸುತಲೀ ||
ಮಂಗಲಪ್ರದವೆನಿಸಿ ಸಮರಸ |
ದಿಂಗಿತವ ತಳೆದೆಕವೃತ್ತಾಮಹ |
ಲಿಂಗವೇ ತಾನೆನಿಸಿಪ್ಪದೆಂದನು ಅನ್ನದಾನೀಶ || ೫೮ ||

## ೨೩. ಅಷ್ಟಾವರಣದ ಪ್ರಯೋಜನ

ಜ್ಞಾನಿಯಾದೀ ಶರಣ ಸಂಗವು |
ಸ್ವಾನುಭವದಿಂ ದೆಂಟುವಿಧವಹ |
ಚಾಣೆನಾವರಣಂಗಳಿಗೆ ಸಲೆಧಾಮವೆನಿಸುತಲೀ ||
ಜನನಮರಣಾದಿಗಳ ನಳಿದುಂ |
ತ್ರಿಣಯರೂಪವ ತಳೆದು ಮನುಮುಖ |
ವೆನಿಸಿ ಭಾಸಿಪ್ಪುದೆನುತಲುಸಿರಿದ ಅನ್ನದಾನೀಶ || ೫೯ ||

ಗುರುವು ಲಿಂಗಂ ಜಂಗಮವುಪಸ |
ಪರಮ ಅಧಿದೇವ ತೆಗಳೆನಿಪ್ಪವು |
ವರಮ ಭಸಿತಂ ಮನುವು ಶ್ರೀರುದ್ರಾಕ್ಷಸಾಧನವು |
ಪರಮಪಾದೋದಕವು ಚಿರಸುಖ
ವೆರಕವಹ ಶೇಷಪ್ರಸಾದವು |
ವರ ಷು ಫಲಗಳಿವೆನಿಪವೆಂದನು ಅನ್ನದಾನೀಶ || ೬೦ ||

## ೨೪. ಅಷ್ಟಾವರಣ ಜ್ಞಾನಾಚಾರ

ಜ್ಞಾನರೂಪಾವರಣ ಗುರುಚರ |
ರನಘ ಶಿವಲಿಂಗಾಕ್ಷಮಣಿಗಳ |
ವೆನಿಪವಾಕ್ರಿಯ ರೂಪದಾವರಣಗಳ ನೀಂ ಕೇಳು ||
ಮನುವು ಭಸಿತವು ಪರಮ ಶೇಷವ |
ದನುಪಮದ ಚರಪಾದ ತೀರ್ಥವ |
ದೆನಿಪವೀ ನಾಲ್ಕೆನುತಲುಸಿರಿದ ಅನ್ನದಾನೀಶ || ೬೧ ||

## ೨೫. ಶಿವಯೋಗಿಯಲ್ಲಿ ಅಷ್ಟಾವರಣ

ಇಂತು ಅರಿಷಾಚಾರಗಳ ತಾ |
ನಾಂತು ಕ್ರೋಧಿಪನಷ್ಟವಿಧದಿಂ |
ಸಂತತಿ ನಿಷ್ಕಲರೂಪಿನಾ ಶಿವಯೋಗಿ ದೇಹದೊಳು ||
ಕಂಥೆರೂಪದೊಳಿರ್ಪ ರಾಜಿಸ |
ನಿಂತು ಅಷ್ಟಾವರಣ ದೇಹದ |
ನಾಂತಿರುವ ನೀ ಶರಣನೆಂದನು ಅಣ್ಣದಾಸೀರ ||೯೨||

## ೨೬. ಪಂಚಾಚಾರ ವಿವರ

ಇನ್ನು ಪಂಚಾಚಾರಗಳ ನಿಜ |
ವನ್ನು ತಿಳಿದೀ ಶರಣ ಕೃಪೆಯಿಂ |
ತನ್ನ ಪಂಚಪ್ರಾಣದೊಳು ಧರಿಸುತಲಿ ಚರಿಸುವನು ||
ಮುನ್ನ ಲಿಂಗಾಚಾರವದರಿಂ |
ಸನ್ನುತಸದಾಚಾರ ಘನವನ |
ವಿನ್ನು ಶಿವಚಾರವೆಂದನು ಅಣ್ಣದಾಸೀರ ||೯೩||

ಶಿವಗಣದ ಭೃತ್ಯಾಚರಣೆಗಳ |
ಈ ವಿಧದಿಂದ ಲ್ಲಿದು ಆ ಚಾ |
ರವಿವನರಿಯುತ್ತೀಕ ವಗ್ರದ ಮನದ ಮಾರ್ಗದೊಳು ||
ಭುವಿಯೊಳನುದಿನ ಚರಿಸಿ ಶಿವ ಧ |
ರ್ಮವನು ಪೆರ್ಚಿಸಿ ವರ ಶಿವಾಚಾ |
ರವನು ಪರಿಪಾಲಿಸುವುದೆಂದನು ಅಣ್ಣದಾಸೀರ ||೯೪||

ಗುರುವಿನಿಂ ದೀಕ್ಷೆಯನು ಪಡೆಯುತ |
ಲಿದು ಲಿಂಗಾಂಗೈಕ್ಯ ವಿವರವ |
ವೀರಶೈವಾಚಾರ ಮಾರ್ಗದಿ ಲಿಂಗನಿಷ್ಠೆಯನು ||
ಧರಿಸಿ ಶಿವಪದಸೇರಿ ನಿಜ ಸುಖ |
ದೊರೆಗೊಳ್ಳಲು ಪರಮ ಲಿಂಗಾ |
ಚಾರವಿದು ಕೇಳೆನುತ ಬೆಸಸಿದ ಅಣ್ಣದಾಸೀರ

ಲಿಂಗನಡೆಘನ ಲಿಂಗನುಡಿತನು ।
ಲಿಂಗಮನವಾ ಹರಣತಾ ಘನ ।
ಲಿಂಗ ಕಳೆತಾನಾಂತು ವಿಷಯದ ವಾಸನೆಯ ತೊರೆದು ॥
ಲಿಂಗಲೀಯಗಳೆನಿಸಿ ಪರತರ ।
ಮಂಗಲದ ಚಿದ್ರೂಪ ಧರಿಸಲು ।
ಲಿಂಗವಾಚಾರವನು ತಿಳಿಸಿದೆ ಅನ್ನದಾನೀಶ ॥ ೯೬ ॥

ಸತ್ಯ ಶುದ್ಧಮೆನಿಪ್ಪ ಕಾಯಕ ।
ಕೃತ್ಯವಂ ನೆರೆಮಾಡಲೊದಗಿದ ।
ವಿತ್ತದಿಂ ಗುರುಲಿಂಗಚರ ದಾಸೋಹವನೆಮಾಡಿ ॥
ಸ್ತುತ್ಯ ನಡೆ ನುಡಿ ಯುಕ್ತನಾಗುತೆ ।
ಮಿಥ್ಯವಹ ಕೃತ್ಯಗಳ ವರ್ಜಿಸೆ ।
ಸತ್ಯದ ಸದಾಚಾರವದೆಂದೆ ಅನ್ನದಾನೀಶ ॥ ೯೭ ॥

ಶಿವನ ಲಾಂಛನಧಾರಿಗಳು ಪರ ।
ಶಿವನ ರೂಪೆಂದೆನುತ ಭಾವಿಸಿ ।
ಶಿವನ ಭಕ್ತರ ಜಾತಿವರ್ಣಾಶ್ರಮವನರಸದಲೆ ॥
ಅವಿಕಲತೆಯಿಂ ತಳೆದು ಹರಣಧ ।
ನವನು ನೆರೆಸಲ್ಲಿಸುವ ಸದ್ಭಾ ।
ವವದನೆ ಶಿವಾಚಾರವೆಂದನು ಅನ್ನದಾನೀಶ ॥ ೯೮ ॥

ವೀರಶೈವಾಚಾರ ಧರ್ಮದ ।
ಪರಮಗುರು ಶಿವಚರರ ನಿಂದೆಯ ।
ಮರವಿನಿಂದಾದರೆಯು ಕೇಳದೆ ವೀರವರ್ತನದಿ ॥
ಶರೀರಹರಣಾದಿಗಳ ಹಂಗನು ।
ತೊರೆದು ಪರವಾದಿಗಳ ಜಯಿಸಲು ।
ವರಗಣಾಚಾರವೇ ಅದೆಂದೆ ಅನ್ನದಾನೀಶ ॥ ೯೯ ॥

ಶರಣಜನದೊಳು ಕಿಂಕರತೆಯನು |
ಧರಿಸಿ ಸಮ್ಮುದದಿರುತವರಡಿ |
ಸರಸಿರುಹವನು ಭೃತ್ಯಭಾವದಿ ಸೇವಿಸುತ್ತಿರಲು ||
ಹರನೆ ತಾನೆನಿಸುವನುಮಿದರನು |
ಪರಮ ಭೃತ್ಯಾಚಾರವನು ಶಿವ |
ಶರಣ ತಾಂ ತಳೆದಿರ್ಪನೆಂದೆಯ ಅನ್ನದಾನೀಶ || ೧೦೦ ||

ಇಂತಿಪ್ಪೈದಾಚಾರಗಳ ತಾ ||
ನಾಂತು ಪಂಚಪ್ರಾಣದೊಳು ಘನ |
ಶಾಂತನೆನಿಸುತ ಲಿಂಗನಿಷ್ಠೆಯ ಪರಮ ವರ್ತನದೀ ||
ದಾಂತನಾಗುತಲಾಚರಣೆ ವಿ |
ಶ್ರಾಂತನೆನಿಸುತ ಪರಮಸುಖಕಳೆ |
ಯಾಂತು ರಾಜಿಪನೆನುತ ಬೆಸಸಿದೆ ಅನ್ನದಾನೀಶ || ೧೦೧ ||

## ೨೭. ಷಟ್‌ಸ್ಥಲ

ಇನ್ನು ಷಟ್ಸ್ಥಲಗಳ ಪೇಳುವೆ |
ಸನ್ನುತಾಷ್ಟಾವರಣಗಳ ಸಂ |
ಪನ್ನ ದೇಹದಿ ಹರಣದೊಳಗಾಚಾರಗಳನಾಂತು ||
ಉನ್ನತಾತ್ಮದಿ ವರಷಟ್ಸ್ಥಲ |
ವನ್ನು ಧರಿಸುತ ಶಿವಸಯೋಗದೊ |
ಳಿನ್ನು ತಾ ಶೋಭಿಸುವನೆಂದೆಯ ಅನ್ನದಾನೀಶ || ೧೦೨ ||

ಶರೀರವಿಂದ್ರಿಯ ನಿಕರಮದು ತಾ |
ನೀರಮೇಲಿನಗುಳ್ಳೆಯಂದದಿ |
ತೋರಿಯಡಗುವದೆಂದು ಭಾವಿಸಿ ಭಕ್ತಿವರ್ತನದಿ ||
ವಿರತಿಯಿಂ ಫಲದಿಚ್ಛೆವಡೆಯದೆ |
ನಿರುತ ಹರಗುರುಚರರ ಸೇವೆಯೊ |
ಳಿರಲು ಭಕ್ತಸ್ಥಲವಿದೆಂದೆಯ ಅನ್ನದಾನೀಶ || ೧೦೩ ||

ಪಿಡಿದ ನಿಯಮವ್ರತಗಳೊಳು ಘನ ।
ದೃಢತೆಯನು ತಳೆದಾಸ್ತಿಕತ್ವವ ।
ಬಿಡದೆ ಪರಪಥಪರಧನಂಗಳ ನೋಡಿ ಮೋಹಿಸದೆ ॥
ಸಡಗರದಲಿಂಗೈಕ್ಯನಿಷ್ಠೆಯ ।
ಪಿಡಿದು ಸದ್ವರ್ತನವ ಚರಿಸಲು ।
ದೃಢದ ಮಾಹೇಶ್ವರನದೆಂದೆಯ ಅನ್ನದಾನೀಶ ॥ ೧೦೪ ॥

ತಾನುಭೋಗಿಪ ಸಕಲವಿಷಯಗ ।
ಳೆನು ದ್ರವ್ಯಂಗಳನು ಘನತರ ।
ಚಿನುಮಯಾತ್ಮಕ ಲಿಂಗಕರ್ಪಿಸಿ ವಿಗತಮೋಹದೊಳು ॥
ನಾನು ಎಂಬಾಹಂಕೃತಿಬಿಟ್ಟು ।
ಘನಸುಖಪ್ರದ ಶೇಷಭೋಗಿಸ ।
ಲನಘಶೇಷಸ್ಥಲವಿದೆಂದೆಯ ಅನ್ನದಾನೀಶ ॥ ೧೦೫ ॥

ಪ್ರಾಣದೊಳಗಿಂದ್ರಿಯಗಳೊಳು ಘನ ।
ಮೆನಿಪ ಸಂಭ್ರಾಂತಿಯನು ತೊಲಗಿಸಿ ।
ಮನವನಾಘನ ಲಿಂಗದೊಳಗೈಕ್ಯತೆಯಗೊಳಿಸುತಲೀ ॥
ಚಿನುಮಯಾತ್ಮಕ ಲಿಂಗದೊಳಗನು ।
ಮನವು ಚಲಿಸದ ತೆರದೊಳಿರ್ದ ।
ಪ್ರಾಣಲಿಂಗಸ್ಥಲವಿದೆಂದೆಯ ಅನ್ನದಾನೀಶ ॥ ೧೦೬ ॥

ಪರಮ ಸಮ್ಯಕ್ ಜ್ಞಾನದಿಂತನು
ಕರಣದೊಳು ಘನಲಿಂಗಮಿರ್ಪುದ ।
ನರಿಪ ಚಿತ್ಪರಿಣಾಮವೇ ಘನವಿಶ್ವಮಿಂತೆಂಬ ॥
ಚಿರಸುಖಾನಂದದೊಳು ಲಿಂಗವೆ ।
ಪರಮ ಪತಿ ತಾನವರಸತಿ ಎಂ ।
ದರಿಪ ಶರಣಸ್ಥಲವಿದೆಂದೆಯ ಅನ್ನದಾನೀಶ ॥ ೧೦೭ ॥

ನಾನು ನೀನೆಂಬುಭಯ ಶಬ್ದವಿ ।
ತಾನನಿರ್ಗತವಾಗಿ ಸಹಜ ।
ಜ್ಞಾನದಿಂ ದೇಹೇಂದ್ರಿಯಂಗಳ ವಿದ್ಯೆಯನು ತಿಳಿದು ॥
ತನಗೆ ಆ ಘನಲಿಂಗವಾಶ್ರಯ ।

ತಾನು ಆ ಘನಲಿಂಗಕಾಶ್ರಯ ||
ವೆನಿಸಿಪ್ಪ ದ್ವೈಕ್ಯಸ್ಥಲವಿದೆಂದೆಯು ಅನ್ನದಾನೀಶ || ೧೦೮ ||

## ೨೮. ಉಪಸಂಹಾರ

ಇದುವೆ ತಾಂ ಶಿವಯೋಗ ವೆನಿಸುವ ||
ದಿದುವೆ ಲಿಂಗಾಂಗೈಕ್ಯದನುವನು |
ಬೋಧಿಸುವ ಶಿವಭಕ್ತಿಯನು ಭಾವಾಚರಣೆಪೂರ್ಣ ||
ಇದುವೆ ಸಕಲಾಗಮದ ಸಾರವಿ ||
ದೊದವಿಕೇಳ್ದಾ ಚರಿಸುವವರಿಗೆ |
ಸದಮಲಾನಂದವಹುದೆಂದೆಯು ಅನ್ನದಾನೀಶ || ೧೦೯ ||

ಭಕ್ತಜನಪರಿತೋಷನೀ ಸುವಿ ||
ರಕ್ತಜನಸಾಂಪ್ರಾಟನೀನವಿ |
ಮುಕ್ತಸುಕ್ಷೇತ್ರ ಪಾಲ್ಕಿರೆಪುರದಿಷ್ಟ ದೇವತೆಯು ||
ಶಕ್ತವಿಷಯಂಗಳಲಿ ಪ್ರಸರಪಿ |
ಭುಕ್ತಿಕಾಂಕ್ಷೆಯುತೋರದೆಂದವಿ |
ಮುಕ್ತನೆನ್ನಂ ಮಾಡಿಸಲಹಿದೆ ಅನ್ನದಾನೀಶ || ೧೧೦ ||
ನಾನುನೀನೆಂಬುಭಯ ಭೇದವ |
ದೇನುತೋರವೆ ನನ್ನ ಪೂರ್ವದ |
ಅನಿಷ್ಟಕೃತಿಯಬಿಡಿಸಿ ನನ್ನಂ ನಿನ್ನರೂಪದೊಳು ||
ಲೀನಮಂ ಸಲೆಮಾಡಿವರಸು |
ಜ್ಞಾನದಾಯಕ ಗುರುವೆ ಜಯಜಯ |
ಎನುತ ನಿನ್ನಂಘ್ರಿಯೊಳು ನಮಿಸುವೆ ಅನ್ನದಾನೀಶ || ೧೧೧ ||

ಮಂಗಲಂ ಭೋ ಮಾನ ನೀಯನೆ |
ಮಂಗಲಂ ನಿರ್ಧೂತಮಾಯನೆ
ಮಂಗಲಂ ಮಲವನವಿದಾಹಕಸುಕೃತಮಯಕಾಯ ||
ಮಂಗಲಂ ಜಗದೀಶ ಚಿನ್ಮಯ |
ಮಂಗಲಂ ಶಿವಯೋಗ ತನ್ಮಯ |
ಮಂಗಲಂ ಜಯ ಜಯತುಮಹ ಗುರು ಅನ್ನದಾನೀಶ || ೧೧೨ ||

—: ಸಂಪೂರ್ಣಂ :—

ದಿ. ೧೬ ಮೇ, ೧೯೫೫ ನೆಯ ವರ್ಷದ ಮೊದಲುಗೊಂಡು ಶ್ರೀ ಶಿವಲಿಂಗೇಶ್ವರ ಶಿವಾನುಭವ ತತ್ತ್ವ ಪ್ರಚಾರ ಸಮಿತಿಯ ವಾರ್ಷಿಕ ಸಭೆಗಳು ನಡೆಯುತ್ತಲಿವೆ. ಈ ಸಮಿತಿಯ ಮೂಲಕ ಶಿವಾದ್ವೈತ ತತ್ತ್ವ ಪ್ರಚಾರ ಮಾಡಿ ಜನರನ್ನು ಜಾಗ್ರತೆ ಮಾಡುವದೇ ಮುಖ್ಯ ಉದ್ದೇಶವಾಗಿದೆ. ಸಮೀಪದಲ್ಲಿನ ಗುಡ್ಡದಮಲ್ಲಾಪುರದ ಶ್ರೀ ಮೂಕಪ್ಪನವರ ಜಾತ್ರೆಯ ಸಂಬಂಧದಲ್ಲಿ ನಡೆಯಿಸುವ ಶಿವಾನುಭವ ಪ್ರಚಾರ ಕಾರ್ಯವೂ ಸಹ ಇದರಲ್ಲಿ ಅಡಗಿದೆ.

ಭದ್ರಂ ಶುಭಂ ಮಂಗಲಂ.

ಸೊರಬ ತಾಲೂಕ ಮೂಡಿ, ದೊಡ್ಡಿಕೊಪ್ಪ, ನೆಲ್ಲಿಕೊಪ್ಪ ಈ ಮೂರು ಗ್ರಾಮಗಳ ಜನರ ಭಕ್ತಿಯಲ್ಲಿ ಮೂಡಿಯಲ್ಲಿನ ಶ್ರೀ ಶಿವಲಿಂಗೇಶ್ವರಸ್ವಾಮಿಮಠ ಮತ್ತು ಶ್ರೀ ಸೋಮೇಶ್ವರಸ್ವಾಮಿಮಠ ಈ ಉಭಯ ಮಠಗಳ ಕಾರ್ಯಗಳು ನಡೆಯುತ್ತಲಿವೆ. ಪೂರ್ವಕಾಲದಿಂದಲೂ ಈ ಮಠಗಳಲ್ಲಿ ಶಿವಯೋಗನಿಷ್ಠರು ಸ್ವಾಮಿಗಳಾಗುತ್ತಿದ್ದರು. ಅವರ ಕೃಪಾಬಲದಿಂದಲೇ ಈಗಿನ ಶ್ರೀ ಮ. ನಿ. ಪ್ರ. ಚೆನ್ನವೀರೇಶ್ವರ ಸ್ವಾಮಿಗಳ ಶಿವಯೋಗಾನುಷ್ಠಾನದ ತಪಸ್ಸಿನ ವೈಭವವೂ ಪ್ರಚಾರವಾಗುತ್ತಲಿದೆ.